**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರ.ಸಂ.ಡಬ್ಲ್ಯೂಸಿಎ:ಎಫ್‌ಸಿ:25:2003**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶ್ರೀ ವೆಂಕಟನಾರೆಪ್ಪ
ಬಿನ್ ಚಿನ್ನಪ್ಪ
2. ಸುರೇಶ್ ಬಿನ್ ವೆಂಕಟನಾರೆಪ್ಪ,
ಗುಂಡ್ಲಹಳ್ಳಿ ವಿಲೇಜ್,
ಗುಡಿಬಂಡೆ ತಾಲ್ಲೂಕು.

1. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ.,
ನಂ. 654, 1ನೇ ಮಹಡಿ, ಸಂತೆ ಮಾರ್ಕೆಟ್,
ಚಾಮರಾಜಪೇಟೆ, 3ನೇ ವಿಭಾಗ,
ಚಿಕ್ಕಬಳ್ಳಾಪುರ ಟೌನ್.
2. ನರಸಿಂಹಯ್ಯ ಬಿನ್ ಚೌಡಪ್ಪ
ಕಾಲುಕುಂಟೆ ವಿಲೇಜ್,
ಎಲಗೆರೆ ಅಂಚೆ,
ಚಿಕ್ಕಬಳ್ಳಾಪುರ ತಾಲ್ಲೂಕು.

**ಅಧಿಸೂಚನೆ**

ಅರ್ಜಿದಾರರಾದ ಶ್ರೀ ವೆಂಕಟನಾರೆಪ್ಪ ಬಿನ್ ಚಿನ್ನಪ್ಪ ಅವರು ತಮ್ಮ ಮಗನಾದ ಶ್ರೀ ಚಂದ್ರ ಅವರು 2ನೇ ಪ್ರತಿವಾದಿ ಶ್ರೀ:ಶ್ರೀಮತಿ ನರಸಿಂಹಯ್ಯ ಬಿನ್ ಚೌಡಪ್ಪ ರವರ ಬಳಿ ಕ್ಲೀನರ್ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 9.04.2003 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 15.09.2003 ರಂದು ನೀಡಲಾಗಿದೆ.

**ಎಂ. ವಿ. ಲಕ್ಷ್ಮಣ ಸ್ವಾಮಿ**
ಕಾರ್ಮಿಕ ಅಧಿಕಾರಿಗಳು ಮತ್ತು ಕಾರ್ಮಿಕ
ನಷ್ಟ ಪರಿಹಾರ ಆಯುಕ್ತರು, ಕೋಲಾರ.

ಪಿ.ಆರ್. 1067

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರ.ಸಂ.ಡಬ್ಲ್ಯೂಸಿಎ:ಎಫ್‌ಸಿ:26:2003**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶ್ರೀಮತಿ ಶಾರದಮ್ಮ
ಕೋಂ ಶ್ರೀನಿವಾಸ್
2. ಶ್ರೀಮತಿ ರಾಮಲಕ್ಷಮ್ಮ
ಕೋಂ ರಾಮಚಂದ್ರಪ್ಪ
ನಲಪ್ಪರೆಡ್ಡಿ ಪಳ್ಯಹಳ್ಳಿ ವಿಲೇಜ್,
ಗುಲೂರು ಹೋಬಳಿ,
ಬಾಗೇಪಲ್ಲಿ ತಾಲ್ಲೂಕು.

1. ಯುನೈಟೆಡ್ ಇಂಡಿಯಾ ಇನ್‌ಷೂರೆನ್ಸ್ ಕಂ. ಲಿ.,
1ನೇ ಮಹಡಿ, ಎಸ್.ಬಿ.ಎಲ್.ಟಿ. ಬಿಲ್ಡಿಂಗ್,
ಪಾಲಿಟೆಕ್ನಿಕ್ ರಸ್ತೆ, ಕೆ. ಆರ್. ಎಕ್ಸ್‌ಟೆನ್‌ಷನ್,
ಚಿಂತಾಮಣಿ.
2. ಶ್ರೀ ವೆಂಕಟಾಚಲಪತಿ ಬಿ. ವಿ. ಬಿನ್ ಲೇಟ್
ಎಂ. ವೆಂಕಟೇಶಪ್ಪ, ಡಿ.ವಿ.ಜಿ. ರಸ್ತೆ,
ಬಾಗೇಪಲ್ಲಿ ತಾ:
3. ಯುನೈಟೆಡ್ ಇಂಡಿಯಾ ಇನ್‌ಷೂರೆನ್ಸ್ ಕಂ. ಲಿ.,
ನಂ. 40, 1ನೇ ಮಹಡಿ, ಲಕ್ಷ್ಮಿ ಕಾಂಪ್ಲೆಕ್ಸ್,
ಕೆ.ಆರ್. ರಸ್ತೆ, ಬೆಂಗಳೂರು.
4. ಶ್ರೀ ಶ್ರೀರಾಮರೆಡ್ಡಿ ಬಿನ್ ಪಾಪರೆಡ್ಡಿ,
ಗಂಟಿಗಾನಹಳ್ಳಿ ವಿಲೇಜ್, ಬಾಗೇಪಲ್ಲಿ ತಾ:

**ಅಧಿಸೂಚನೆ:**

ಅರ್ಜಿದಾರರಾದ ಶ್ರೀಮತಿ ಶಾರದಮ್ಮ ಕೋಂ ಶ್ರೀನಿವಾಸ್ ಅವರು ತಮ್ಮ ಮಗನಾದ ಶ್ರೀ ಶ್ರೀನಿವಾಸ ಅವರು 2ನೇ ಪ್ರತಿವಾದಿ ಶ್ರೀ:ಶ್ರೀಮತಿ ವೆಂಕಟಾಚಲಪತಿ ಬಿ. ವಿ. ರವರ ಬಳಿ ಕ್ಲೀನರ್ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 20.08.2002 ರಂದು

ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 15.09.2003 ರಂದು ನೀಡಲಾಗಿದೆ.

ಎಂ. ವಿ. ಲಕ್ಷ್ಮಣ ಸ್ವಾಮಿ
ಕಾರ್ಮಿಕ ಅಧಿಕಾರಿಗಳು ಮತ್ತು ಕಾರ್ಮಿಕ
ನಷ್ಟ ಪರಿಹಾರ ಆಯುಕ್ತರು, ಕೋಲಾರ.

ಪಿ.ಆರ್. 1068

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರ.ಸಂ.ಡಬ್ಲ್ಯೂಸಿಎ:ಎಫ್‌ಸಿ:27:2003**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ನಾರಾಯಣಮ್ಮ ಕೋಂ ನಾರಾಯಣಸ್ವಾಮಿ
2. ಕೃಷ್ಣ ಬಿನ್ ನಾರಾಯಣಸ್ವಾಮಿ
3. ಸತೀಶ್ ಬಿನ್ ನಾರಾಯಣಸ್ವಾಮಿ
4. ಗಂಗಾಧರ್ ಬಿನ್ ನಾರಾಯಣಸ್ವಾಮಿ
5. ರಾಮಕ್ಕ ಬಿನ್ ಲೇಟ್ ಕೃಷ್ಣಪ್ಪ
   ಅಂಬೇಡ್ಕರ್ ನಗರ, ಮುಳಬಾಗಿಲು ತಾ:
   ಕೋಲಾರ ಜಿಲ್ಲೆ.

1. ತೀರು ಭೋಟೆ ಸಾಬ್
   ಬಿನ್ ಅಬ್ದುಲ್ ರಜಾಕ್
   ಮುಜಾವರ್ ಮೊಹಲ್ಲಾ
   ಮುಳಬಾಗಿಲು ಟೌನ್,
   ಕೋಲಾರ ಜಿಲ್ಲೆ.
2. ಮೆ: ಯುನೈಟೆಡ್ ಇಂಡಿಯಾ
   ಇನ್‌ಷೂರೆನ್ಸ್ ಕಂಪನಿ ಲಿಮಿಟೆಡ್,
   ದೊಡ್ಡಪೇಟೆ, ಕೋಲಾರ.

**ಅಧಿಸೂಚನೆ**

ಅರ್ಜಿದಾರರಾದ ನಾರಾಯಣಮ್ಮ ಕೋಂ ನಾರಾಯಣಸ್ವಾಮಿ ಅವರು ತಮ್ಮ ಗಂಡನಾದ ಶ್ರೀ ನಾರಾಯಣಸ್ವಾಮಿ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ತೀರು ಚೋಟೆ ಸಾಬ್ ಬಿನ್ ಅಬ್ದುಲ್ ರಜಾಕ್‌ರವರ ಬಳಿ ಕ್ಲೀನರ್: ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 14.07.2003 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 15.09.2003 ರಂದು ನೀಡಲಾಗಿದೆ.

ಎಂ. ವಿ. ಲಕ್ಷ್ಮಣ ಸ್ವಾಮಿ
ಕಾರ್ಮಿಕ ಅಧಿಕಾರಿಗಳು ಮತ್ತು ಕಾರ್ಮಿಕ
ನಷ್ಟ ಪರಿಹಾರ ಆಯುಕ್ತರು, ಕೋಲಾರ.

ಪಿ.ಆರ್. 1069

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರ.ಸಂ.ಡಬ್ಲ್ಯೂಸಿಎ:ಎಫ್‌ಸಿ:28:2003/**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಶ್ರೀಮತಿ ಶಿವಮ್ಮ
   ಕೋಂ ಲೇಟ್ ನರಸಿಂಹಪ್ಪ
2. ಸದೇಶ್ ಬಿನ್ ಲೇಟ್ ನರಸಿಂಹಪ್ಪ
3. ನವೀನ್ ಬಿನ್ ಲೇಟ್ ನರಸಿಂಹಪ್ಪ
4. ಚಂದ್ರಶೇಖರ್ ಬಿನ್ ಲೇಟ್ ನರಸಿಂಹಪ್ಪ
   ಪರಗುಡು ವಿಲೇಜ್ ಮತ್ತು ಅಂಚೆ,
   ಬಾಗೇಪಲ್ಲಿ ತಾಲ್ಲೂಕು,
   ಕೋಲಾರ ಜಿಲ್ಲೆ.

1. ಕೆ. ಭಾಸ್ಕರ್ ರಾಜು
   ಬಿನ್ ಬಸವರಾಜು
   ನಂ. 459:7, 'ಎಫ್' ಬ್ಲಾಕ್,
   ಸಹಕಾರನಗರ, ಬೆಂಗಳೂರು-560 092.
2. ಯುನೈಟೆಡ್ ಇಂಡಿಯಾ
   ಇನ್‌ಷೂರೆನ್ಸ್ ಕಂ. ಲಿ.,
   ನಂ. 143: 144, ಸಿಕೆಎಂ ಚೇಂಬರ್ಸ್, 1ನೇ ಮುಖ್ಯ ರಸ್ತೆ,
   ಶೇಷಾದ್ರಿಪುರಂ, ಬೆಂಗಳೂರು-560 020.

## ಅಧಿಸೂಚನೆ

ಅರ್ಜಿದಾರರಾದ ಶ್ರೀಮತಿ ಶಿವಮ್ಮ ಕೋಂ ಲೇಟ್ ನರಸಿಂಹಪ್ಪ ಅವರು ತಮ್ಮ ಗಂಡನಾದ ಶ್ರೀ ಪೆದ್ದ ನರಸಿಂಹಪ್ಪ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಕೆ. ಭಾಸ್ಕರ್ ರಾಜು ಬಿನ್. ಬಸವರಾಜು ರವರ ಬಳಿ :ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 14.05.2003 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 15.09.2003 ರಂದು ನೀಡಲಾಗಿದೆ.

**ಎಂ. ವಿ. ಲಕ್ಷ್ಮಣ ಸ್ವಾಮಿ**
ಕಾರ್ಮಿಕ ಅಧಿಕಾರಿಗಳು ಮತ್ತು ಕಾರ್ಮಿಕ
ನಷ್ಟ ಪರಿಹಾರ ಆಯುಕ್ತರು,
ಕೋಲಾರ.

ಪಿ.ಆರ್. 1070

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ

**ಪ್ರ.ಸಂ.ಡಬ್ಲ್ಯೂಸಿಎ:ಎಫ್‌ಸಿ:29:2003**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಸೀತಮ್ಮ ಕೋಂ ಲೇಟ್ ಹೆಚ್. ರಾಮಪ್ಪ
ಯಾಚನಹಳ್ಳಿ ವಿಲೇಜ್,
ಮಲ್ಲನಾಯಕನಹಳ್ಳಿ ಅಂಚೆ,
ತಾಯಲೂರು ಹೋಬಳಿ,
ಮುಳಬಾಗಿಲು ತಾಲ್ಲೂಕು,
ಕೋಲಾರ ಜಿಲ್ಲೆ.

1. ಎಸ್. ನಾರಾಯಣರೆಡ್ಡಿ ಬಿನ್ ನಂಜರೆಡ್ಡಿ,
ಸಂಧ್ಯ ಟ್ರಾವೆಲ್ಸ್,
ಮುತ್ಯಾಲ್‌ಪೇಟ್, ಮುಳಬಾಗಿಲು ಟೌನ್
ಮತ್ತು ತಾಲ್ಲೂಕು, ಕೋಲಾರ ಜಿಲ್ಲೆ.
2. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪನಿ ಲಿಮಿಟೆಡ್,
ನಂ. 10-214, ಪ್ರಕಾಶಂ ಹೈ ರೋಡ್, ಜಿಲ್ಲಾ
ನ್ಯಾಯಾಲಯದ ಎದುರು, ಚಿತ್ತೂರು ನಗರ ಮತ್ತು ಜಿಲ್ಲೆ
ಆಂಧ್ರಪ್ರದೇಶ.

## ಅಧಿಸೂಚನೆ:

ಅರ್ಜಿದಾರರಾದ ಸೀತಮ್ಮ ಕೋಂ ಲೇಟ್ ಹೆಚ್. ರಾಮಪ್ಪ ಅವರು ತಮ್ಮ ಮಗನಾದ ಶ್ರೀ ವೈ. ಆರ್. ಶಂಕರಪ್ಪ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಎಸ್. ನಾರಾಯಣರೆಡ್ಡಿ ಬಿನ್ ನಂಜರೆಡ್ಡಿ ರವರ ಬಳಿ ಕಂಡೆಕ್ಟರ್ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 17.05.2003 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 15.09.2003 ರಂದು ನೀಡಲಾಗಿದೆ.

**ಎಂ. ವಿ. ಲಕ್ಷ್ಮಣ ಸ್ವಾಮಿ**
ಕಾರ್ಮಿಕ ಅಧಿಕಾರಿಗಳು ಮತ್ತು ಕಾರ್ಮಿಕ
ನಷ್ಟ ಪರಿಹಾರ ಆಯುಕ್ತರು,
ಕೋಲಾರ.

ಪಿ.ಆರ್. 1071

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು.**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:40/03 ದಿನಾಂಕ: 1ನೇ ಸೆಪ್ಟೆಂಬರ್ 2003**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಭೀಮಣ್ಣ S/o ನಾರಾಯಣಪ್ಪ
   ವಯಸ್ಸು 50 ವರ್ಷ
2. ಕೆಂಚಮ್ಮ W/o ಭೀಮಣ್ಣ
   ವಯಸ್ಸು, 45 ವರ್ಷ
   R/o ಸಿದ್ಲೆಕೋನ, ಬುಕ್ಕಾಪಟ್ನ
   ಹೋಬಳಿ, ಶಿರಾ ತಾ:
   ತುಮಕೂರು ಜಿಲ್ಲೆ

1. ಡಿ. ಆರ್. ಬೊಮ್ಮಣ್ಣ
   ಪ್ರಾಪ್ತರು, ಮನೆ. ನಂ. 211
   ಈಶ್ವರಿ ನಿಲಯ
   ಧೋಬಿಘಾಟ್‌ರೋಡ್,
   ಎಸ್.ಎಸ್. ಪುರಂ. ತುಮಕೂರು.
2. ದಿ ಯುನೈಟೆಡ್ ಇಂಡಿಯಾ
   ಇನ್‌ಶ್ಯೂರೆನ್ಸ್ ಕಂ. ಲಿ.,
   1ನೇ ಫ್ಲೋರ್ ಜಯದೇವ ಕಾಂಪ್ಲೆಕ್ಸ್
   ಬಿ. ಹೆಚ್. ರಸ್ತೆ, ತುಮಕೂರು.

**ಪ್ರಕಟಣೆ:**

ಅರ್ಜಿದಾರರಾದ ಶ್ರೀ ಭೀಮಣ್ಣ/ ಕೆಂಚಮ್ಮ ಇವರು ತಮ್ಮ ಮಗ ಹನುಮಂತರಾಯಪ್ಪ ಇವರು ಪ್ರತಿವಾದಿ-1, ಡಿ. ಆರ್. ಬೊಮ್ಮಣ್ಣ ಇವರ ಲಾರಿ ನಂ. ಕೆಎ.06.9712 ರಲ್ಲಿ ಕೂಲಿ ಹಾಗೂ ಲೋಡರ್ ಆಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 26.6.2003 ರಂದು ಉದ್ಯೋಗ ಸಮಯದಲ್ಲಿ ಎಂ.ಎಂ. ಕಾವಲ್ ಹತ್ತಿರ ಸುಮಾರು ಮಧ್ಯಾಹ್ನ 1.30 ಗಂಟೆಗೆ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ
ನ್ಯಾಯಾಲಯ, ತುಮಕೂರು ಜಿಲ್ಲೆ,
ತುಮಕೂರು.

ಪಿ.ಆರ್. 1072

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು.**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:41/03 ದಿನಾಂಕ: 1ನೇ ಸೆಪ್ಟೆಂಬರ್ 2003**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಗುಂಡಮ್ಮ W/o ಲೇಟ್ ಯರಗುಂಟಪ್ಪ
   ವಯಸ್ಸು 42 ವರ್ಷ
2. ತಿಪ್ಪೇಸ್ವಾಮಿ S/o ಲೇಟ್‌ಯರಗುಂಟಪ್ಪಾ
   ವಯಸ್ಸು, 25 ವರ್ಷ
   R/o ಅರಸಿಕರೆ ಪಾವಗಡ ತಾ:
   ತುಮಕೂರು ಜಿಲ್ಲೆ

1. ಎನ್. ನರಸಿಂಹರೆಡ್ಡಿ @ ಎನ್. ನಾರಾಯಣರೆಡ್ಡಿ,
   S/o ನರಸಿಂಹಪ್ಪಾ ಪ್ರಾಪ್ತರು.
   R/o ಪೆನ್ನೋಬನಹಳ್ಳಿ
   ಪಾವಗಡ ತಾ: ತುಮಕೂರು ಜಿಲ್ಲೆ.
2. ದಿ ಓರಿಯೆಂಟಲ್ ಇನ್‌ಶ್ಯೂರೆನ್ಸ್ ಕಂ. ಲಿ.,
   TUMA ಬಿಲ್ಡಿಂಗ್, I ಫ್ಲೋರ್ ಜೆ.ಸಿ. ರಸ್ತೆ,
   ತುಮಕೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀ/ಶ್ರೀಮತಿ ಗುಂಡಮ್ಮ ಇವರು ತಮ್ಮ ಯಜಮಾನರಾದ ಯರಗುಂಟಪ್ಪಾ ಇವರು ಪ್ರತಿವಾದಿ-1, ಎನ್. ನರಸಿಂಹರೆಡ್ಡಿ ಇವರ ಟ್ರ್ಯಾಕ್ಟರ್ ಟ್ರೈಲರ್ ನಂ. ಕೆಎ.06.ಟಿ.319 ರಲ್ಲಿ ಲೋಡರ್ ಆಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 3.3.2003 ರಂದು ಉದ್ಯೋಗ ಸಮಯದಲ್ಲಿ ಕೊಂಡಾಪುರ ಕ್ರಾಸ್ ಅಮರಾಪುರ ಅರಸೀಕೆರೆ ರೋಡ್, ಹತ್ತಿರ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು, ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ

ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ
ಪಿ.ಆರ್. 1073 ನ್ಯಾಯಾಲಯ, ತುಮಕೂರು ಜಿಲ್ಲೆ,
ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ,**
**ತುಮಕೂರು ಜಿಲ್ಲೆ, ತುಮಕೂರು.**
**ಸಂಖ್ಯೆ: ಕಾಅತು:ಕಾಪಕಾ:ಸಿಆರ್:43/2003 ದಿನಾಂಕ: 1ನೇ ಸೆಪ್ಟೆಂಬರ್ 2003**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಪುಷ್ಪಲತಾ W/o ಲೇಟ್ ಚಂದ್ರಶೇಖರ್
ವಯಸ್ಸು 32 ವರ್ಷ
2. ಮೋಹನ ಕುಮಾರ S/o ಲೇಟ್
ಚಂದ್ರಶೇಖರ್ ವಯಸ್ಸು, 06 ವರ್ಷ
3. ಲೋಕೇಶ್ S/o ಲೇಟ್ ಚಂದ್ರಶೇಖರ
04 ವರ್ಷ
4. ರೇಖಾನಾಯ್ಕ S/o ರೂಪಾನಾಯಕ್
60 ವರ್ಷ
5. ಸೀತಾಬಾಯಿ W/o ಶೀಖ್ಯಾನಾಯಕ್
55 ವರ್ಷ,
R/o ಅನುಪನಹಳ್ಳಿ, ಕಸಬಾಹೋಬಳಿ
ಶಿರಾ ತಾ: ತುಮಕೂರು ಜಿಲ್ಲೆ.

1. ಎಸ್. ರೋಶನ್ ಜಮೀರ್
S/o ಶೇಶಾವಲಿ
D. No. 8. W.No.6.Md ಯೂಸುಫ್‌ಸಾಬ್ ಸ್ಟ್ರೀಟ್
ಬಳ್ಳಾರಿ
2. ದಿ ಡಿವಿಜನಲ್ ಮ್ಯಾನೇಜರ್
ಯು.ಇ.ಇ.ಕಂ.ಲಿ.,
ರಾಮಕ್ರಿಷ್ಣ ಕಾಂಪ್ಲೆಕ್ಸ್ 1ನೇ ಮಹಡಿ,
ರಾಘವಚಾರಿ ರಸ್ತೆ, ಬಳ್ಳಾರಿ-1

**ಪ್ರಕಟಣೆ:**

ಅರ್ಜಿದಾರರಾದ ಶ್ರೀಮತಿ ಪುಷ್ಪಲತಾ ಇವರು ತಮ್ಮ ಯಜಮಾನರಾದ ಚಂದ್ರಶೇಖರ ಇವರು ಪ್ರತಿವಾದಿ-1, ಎಸ್. ರೋಶನ್‌ಜಮೀರ್ ಇವರ ಲಾರಿ ಸಂ:ಎಪಿ.-05/ಯು/2609 ರಲ್ಲಿ ಕೂಲಿಯಾಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 28.4.2003 ರಂದು ಉದ್ಯೋಗ ಸಮಯದಲ್ಲಿ ನಾಮಯಗೆರೆಗೇಟ್ ರಾಜಣ್ಣನವರ ಜಮೀನಿನ ಹತ್ತಿರ ಮಧುಗಿರಿ ಶಿರಾರೋಡ್‌ನಲ್ಲಿ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು, ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ
ಪಿ.ಆರ್. 1074 ನ್ಯಾಯಾಲಯ, ತುಮಕೂರು ಜಿಲ್ಲೆ
ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ,**
**ತುಮಕೂರು ಜಿಲ್ಲೆ, ತುಮಕೂರು.**
**ಸಂಖ್ಯೆ: ಕಾಅತು:ಕಾಪಕಾ:ಸಿಆರ್:46/2003 ದಿನಾಂಕ: 1ನೇ ಸೆಪ್ಟೆಂಬರ್ 2003**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಎಚ್. ಬಿ. ಲಿಂಗಣ್ಣ S/o ಬೋರಯ್ಯ
ವಯಸ್ಸು 60 ವರ್ಷ
2. ಬಿ. ಗಂಗಮ್ಮ W/o ಎಚ್.ಬಿ. ಲಿಂಗಣ್ಣ
ವಯಸ್ಸು, 52 ವರ್ಷ
**ಈರ್ವರ ವಿಳಾಸ:**
ಜೋಡಿಹೊಸಹಳ್ಳಿ
ಹುತ್ತರಿ ದುರ್ಗಹೋಬಳಿ
ಕುಣಿಗಲ್ ತಾಲ್ಲೂಕು

1. ಗೋವಿಂದರಾಜ ಎ. ಪ್ರಾಪ್ತರು
ನಂ.673, 6ನೇ ಕ್ರಾಸ್
ಧೋಬಿಘಾಟ್ ಹನುಮಂತನಗರ
ಬೆಂಗಳೂರು- 19
2. ದಿ ಯುನೈಟೆಡ್ ಇಂಡಿಯಾ ಇನ್‌ಶ್ಯೂರೆನ್ಸ್
ಕಂ.ಲಿ., ಬ್ರಾಂಚ್ ಆಫೀಸ್, ಎಸ್.ಟಿ. ಪ್ಯಾಟ್ರಿಕ್
ಎಸ್. ಬಿಲ್ಡಿಂಗ್, 1ನೇ ಫ್ಲೋರ್,
ನಂ. 21, ಮ್ಯುಜಿಯಂ ರಸ್ತೆ ಬೆಂಗಳೂರು- 25

**ಪ್ರಕಟಣೆ:**

ಅರ್ಜಿದಾರರಾದ ಶ್ರೀ/ಶ್ರೀಮತಿ ಎಚ್.ಬಿ. ಲಿಂಗಣ್ಣ ಹಾಗೂ ಬಿ. ಗಂಗಮ್ಮ ಇವರು ತಮ್ಮ ಮಗನಾದ ಶಿವಕುಮಾರ್ ಇವರು ಪ್ರತಿವಾದಿ-1, ಗೋವಿಂದರಾಜ ಎ. ಇವರ ಆಟೋರಿಕ್ಷಾ ನಂ.ಕೆಎ.06/ಬಿ.609 ರಲ್ಲಿ ಚಾಲಕನಾಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 24.2.2001 ರಂದು ಉದ್ಯೋಗ ಸಮಯದಲ್ಲಿ ಚನ್ನದನಿಪಾಳ್ಯ ಹತ್ತಿರ ಮಾಗಡಿ ಬೆಂಗಳೂರು ರಸ್ತೆಯಲ್ಲಿ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು, ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ
ಪಿ.ಆರ್. 1075 ನ್ಯಾಯಾಲಯ, ತುಮಕೂರು ಜಿಲ್ಲೆ,
ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ,**
**ತುಮಕೂರು ಜಿಲ್ಲೆ, ತುಮಕೂರು.**
**ಸಂಖ್ಯೆ: ಕಾಅತು:ಕಾಪಕಾ:ಸಿಆರ್:48/2003 ದಿನಾಂಕ: 1ನೇ ಸೆಪ್ಟೆಂಬರ್ 2003**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಮರಿಲಿಂಗಮ್ಮ W/o ಲೇಟ್ ರಾಮಯ್ಯ 30 ವರ್ಷ
2. ಚಂದ್ರಕಲಾ D/o ಲೇಟ್ ರಾಮಯ್ಯ, 14 ವರ್ಷ
3. ರಾಧಾ D/o ಲೇಟ್ ರಾಮಯ್ಯ, 12 ವರ್ಷ
4. ರಂಗಸ್ವಾಮಿ S/o ಲೇಟ್ ರಾಮಯ್ಯ, 9 ವರ್ಷ
5. ಭೈರವ S/o ಲೇಟ್ ರಾಮಯ್ಯ 6 ವರ್ಷ
   R/o ಬಲಮಧಿಹಳ್ಳಿ ತುರುವೇಕೆರೆ ತಾ: ಕಸಬ ಹೋಬಳಿ
6. ಚೌಡಪ್ಪ S/o ಲೇಟ್ ಸಣ್ಣಯ್ಯ 70 ವರ್ಷ
7. ಲಕ್ಷ್ಮಮ್ಮ W/o ಚೌಡಪ್ಪ 65 ವರ್ಷ,
   R/o ತಾವರೆಕೆರೆ ತುರುವೇಕೆರೆ ತಾ: ತುಮಕೂರು ಜಿಲ್ಲೆ.

ಪ್ರತಿವಾದಿಗಳು:

1. ವೀರಭದ್ರಯ್ಯ S/o ನಂಜುಂಡಯ್ಯ 65 ವರ್ಷ
   R/o ಬೆಟ್ಟದಹಳ್ಳಿ, ಗುಬ್ಬಿ ತಾ: ತುಮಕೂರು ಜಿಲ್ಲೆ.
2. ದಿ ನ್ಯಾಷನಲ್ ಇನ್‌ಶ್ಯೂರೆನ್ಸ್ ಕಂ. ಲಿ.,
   ಬ್ರ್ಯಾಂಚ್ ಆಫೀಸ್, ಮುದ್ದಪ್ಪ ಕಾಂಪ್ಲೆಕ್ಸ್
   ವಿ.ವಿ. ರೋಡ್, ತುಮಕೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಮರಿಲಿಂಗಮ್ಮ ಹಾಗೂ ಇತರರು ಇವರು ತಮ್ಮ ಯಜಮಾನರಾದ ರಾಮಯ್ಯ ಇವರು ಪ್ರತಿವಾದಿ-1, ವೀರಭದ್ರಯ್ಯ ಇವರ ಟ್ರ್ಯಾಕ್ಟರ್-ಟ್ರೈಲರ್ ಸಂ:ಕೆಎ.06.ಟಿ.6872 ರಲ್ಲಿ ಕೂಲಿ- ಲೋಡರ್-ಅನ್‌ಲೋಡರ್ ಆಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 10.5.2003 ರಾತ್ರಿ 8.30 ಗಂಟೆಗೆ ಉದ್ಯೋಗ ಸಮಯದಲ್ಲಿ ಈಚನೂರು ಗ್ರಾಮ ತಿಪಟೂರು ತಾಲ್ಲೂಕಿನಲ್ಲಿ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು, ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ
ಪಿ.ಆರ್. 1076 ನ್ಯಾಯಾಲಯ, ತುಮಕೂರು ಜಿಲ್ಲೆ,
ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ,**
**ತುಮಕೂರು ಜಿಲ್ಲೆ, ತುಮಕೂರು.**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:51/2003 ದಿನಾಂಕ: 1ನೇ ಸೆಪ್ಟೆಂಬರ್ 2003**

**ಅರ್ಜಿದಾರರು**

1. ದೊಡ್ಡ ಹನುಮಂತಯ್ಯ S/o ಲೇಟ್ ಪಾಪಣ್ಣ ವಯಸ್ಸು, 50 ವರ್ಷ
2. ಮುತ್ತನರಸಮ್ಮ W/o ದೊಡ್ಡ ಹನುಮಂತಯ್ಯ ವಯಸ್ಸು, 45 ವರ್ಷ
3. ಅನ್ನಪೂರ್ಣಮ್ಮ ಡಿ. D/o ದೊಡ್ಡಹನುಮಂತಯ್ಯ ವಯಸ್ಸು 18 ವರ್ಷ
4. ಮಂಗಳಮ್ಮ ಎಚ್.ಡಿ. D/o ದೊಡ್ಡ ಹನುಮಂತಯ್ಯ ವಯಸ್ಸು 15 ವರ್ಷ
   R/o ಹಿರೆ ಗುಂಡಗಲ್, ಬಳ್ಳಾಪುರ ಪೋಸ್ಟ್
   ಕೋರಾ ಹೋಬಳಿ,
   ತುಮಕೂರು. ತಾ: ಮತ್ತು ಜಿಲ್ಲೆ.

**ವಿರುದ್ಧ ಪ್ರತಿವಾದಿಗಳು**

1. ವಿ. ಎ. ಮೀನಾ W/o ಯು. ಎನ್. ಅಶೋಕಾ ಡೋರ್ ನಂ. 711 ಸವಿ ನಿಲಯ 4ನೇ ಕ್ರಾಸ್, ಎಂ.ಜಿ. ರೋಡ್ ತುಮಕೂರು
2. ದಿ ನ್ಯಾಷನಲ್ ಇನ್‌ಶ್ಯೂರೇನ್ಸ್ ಕಂ. ಲಿ., ಜಿ. ಮುದ್ದಪ್ಪಾ ಕಾಂಪ್ಲೆಕ್ಸ್ ವಿವೇಕಾನಂದ ರಸ್ತೆ, ತುಮಕೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀ/ಶೀಮತಿ ದೊಡ್ಡಹನುಮಂತಯ್ಯ ಹಾಗೂ ಮುತ್ತ ನರಸಮ್ಮ ಇವರು ತಮ್ಮ ಮಗನಾದ ಎಚ್. ಡಿ. ನಾಗರಾಜ ಇವರು ಪ್ರತಿವಾದಿ-1, ವಿ. ಎ. ಮೀನಾ ಇವರ ಕಾರು ಸಂ. ಕೆಎ.01 ಎನ್.9152 ರಲ್ಲಿ ಚಾಲಕನಾಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 25.5.2003 ರಂದು ಉದ್ಯೋಗ ಸಮಯದಲ್ಲಿ ಮಂಗಳೂರಿನಿಂದ ಉಡುಪಿಕಡೆಗೆ ಹೋಗುವಾಗ ಮಲ್ಕಿಬೊಪ್ಪನಡು ಟೆಂಪಲ್, ಎನ್.ಎಚ್.17 ರಸ್ತೆಯಲ್ಲಿ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು, ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ
ನ್ಯಾಯಾಲಯ, ತುಮಕೂರು ಜಿಲ್ಲೆ,
ತುಮಕೂರು.

ಪಿ.ಆರ್. 1077

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ,**
**ತುಮಕೂರು ಜಿಲ್ಲೆ, ತುಮಕೂರು.**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:54/2003 ದಿನಾಂಕ: 1ನೇ ಸೆಪ್ಟೆಂಬರ್ 2003**

**ಅರ್ಜಿದಾರರು**

1. ಜಯಣ್ಣ S/o ಚಿನ್ನಬೋವಿ 40 ವರ್ಷ
   ಶಾರದಮ್ಮ W/o ಜಯಣ್ಣ 38 ವರ್ಷ
2. R/o ದೊಡ್ಡಬೆಲವಡಿ ಕಂದಿಕೆರೆಹೋಬಳಿ
   ಸಿ. ಎನ್. ಹಳ್ಳಿ ತಾಲ್ಲೂಕು,
   ತುಮಕೂರು ಜಿಲ್ಲೆ

**ವಿರುದ್ಧ ಪ್ರತಿವಾದಿಗಳು**

1. ಬಿ.ಆರ್. ನಾರಾಯಣ S/o ರಂಗಪ್ಪಾ
   ಸಪ್ತಗಿರಿ ಎಕ್ಸ್‌ಟೆನ್‌ಶನ್ ಶಿರಾಟೌನ್,
   ತುಮಕೂರು ಜಿಲ್ಲೆ. ನ್ಯಾಷನಲ್
   ಇನ್‌ಶ್ಯೂರೆನ್ ಕಂ. ಲಿ.,
2. ಮುದ್ದಪ್ಪ ಕಾಂಪ್ಲೆಕ್ಸ್,
   ವಿವೇಕಾನಂದ ರಸ್ತೆ,
   ತುಮಕೂರು.

**ಪ್ರಕಟಣೆ:**

ಅರ್ಜಿದಾರರಾದ ಶ್ರೀ/ಶೀಮತಿ ಜಯಣ್ಣ ಹಾಗೂ ಶಾರದಮ್ಮ ಇವರು ತಮ್ಮ ಮಗನಾದ ಶೇಖರ ಇವರು ಪ್ರತಿವಾದಿ-1, ಬಿ.ಆರ್. ನಾರಾಯಣ ಇವರ ಟ್ರ್ಯಾಕ್ಟರ್-ಟ್ರೈಲರ್ ಕೆಎ.46 ಜೆ.789-90 ದರಲ್ಲಿ ಕೂಲಿ ಲೋಡರ್ ಆಗಿ ಕಾರ್ಯನಿರ್ವಹಿಸುತ್ತಿದ್ದು,

ದಿನಾಂಕ: 18.5.2003 ರಂದು ಉದ್ಯೋಗ ಸಮಯದಲ್ಲಿ ಮದ್ದಕ್ಕನಹಳ್ಳಿಯಿಂದ 1ನೇ ಪ್ರತಿವಾದಿಯ ಜಮೀನಿಗೆ ಮರಳಿ ಬರುವಾಗ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು, ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ
ನ್ಯಾಯಾಲಯ, ತುಮಕೂರು ಜಿಲ್ಲೆ
ತುಮಕೂರು.

ಪಿ.ಆರ್. 1078

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ,**
**ತುಮಕೂರು ಜಿಲ್ಲೆ, ತುಮಕೂರು.**

**ಸಂಖ್ಯೆ: ಕಾಅಿತು:ಕಾಪಕಾ:ಸಿಆರ್:56/2003 ದಿನಾಂಕ: 1ನೇ ಸೆಪ್ಟೆಂಬರ್ 2003**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಶ್ರೀಪತಿ ಎಚ್.ಸಿ. S/o ಚನ್ನಯ್ಯ ಶೆಟ್ಟಿ
ವಯಸ್ಸು ಸುಮಾರು 52 ವರ್ಷ
2. ಎಸ್.ಎ. ನಾಗರತ್ನ W/o ಶ್ರೀಪತಿ ಎಚ್.ಸಿ.
ವಯಸ್ಸು ಸುಮಾರು 47 ವರ್ಷ
R/o ಅಮರಜ್ಯೋತಿನಗರ ಸಿದ್ದಾರೂಢ ಮಠದಹತ್ತಿರ
ಕುಣಿಗಲ್‌ರೋಡ್,
ತುಮಕೂರು.

1. ಎಚ್. ಎಸ್. ಶಿವರುದ್ರಮೂರ್ತಿ
"ಶಿವಕೃಪ" ಗೋಕುಲರೋಡ್,
ಎಸ್.ಎಸ್. ಪುರಂ,
ತುಮಕೂರು.
2. M/s ಯುನೈಟೆಡ್ ಇಂಡಿಯಾ ಇನ್‌ಶ್ಯೂರೆನ್ಸ್
ಕಂ. ಲಿ., ಡಿವಿಜನಲ್ ಆಫೀಸ್
"ಕೃಷಿ ಕಾಂಪ್ಲೆಕ್ಸ್" 2ನೇ ಫ್ಲೋರ್,
ಜಿ.ಬಿ. ಪಂಥರೋಡ್
ಉಡುಪಿ-576101.

**ಪ್ರಕಟಣೆ**

ಅರ್ಜಿದಾರರಾದ ಶ್ರೀ/ಶ್ರೀಮತಿ ಶ್ರೀಪತಿ ಎಚ್. ಸಿ. ಹಾಗೂ ಎಸ್. ಎ. ನಾಗರತ್ನ ಇವರು ತಮ್ಮ ಮಗ ಎಸ್. ವಿಜಯ ಇವರು ಪ್ರತಿವಾದಿ-1, ಎಚ್. ಸಿ. ಶಿವರುದ್ರಮೂರ್ತಿ ಇವರ ಟಾಟಾಸುಮೋ ಸಂ:ಕೆಎ.20/8911 ರಲ್ಲಿ ಚಾಲಕನಾಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 3.6.2003 ರಂದು 5.00 ಎ.ಎಂ. ರಲ್ಲಿ ಉದ್ಯೋಗ ಸಮಯದಲ್ಲಿ ಅಂತರಸನಹಳ್ಳಿ ಬೈಪಾಸ್ ಎನ್.ಎಚ್. 4 ಹತ್ತಿರ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು, ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ
ನ್ಯಾಯಾಲಯ, ತುಮಕೂರು ಜಿಲ್ಲೆ
ತುಮಕೂರು.

ಪಿ.ಆರ್. 1079

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ- 6**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**
**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:ಸಿಆರ್:11:2002 ದಿನಾಂಕ: 11ನೇ ಆಗಸ್ಟ್ 2003**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶ್ರೀ ಕಣ್ಣನ್ ಮತ್ತು ಇತರೆ 4 ಜನರು,
ಕೃಷ್ಣಪ್ಪ ಗಾರ್ಡನ್, ತಾವರೆಕೆರೆ,
ಬೆಂಗಳೂರು-560 081.

1. ಮೆ: ಜ್ಯೋತಿ ಡೈಯಿಂಗ್ ವರ್ಕ್ಸ್, ನಂ:4,
ರಾಮದಾಸ್ ನರಹರಿ ರಸ್ತೆ, ತಾವರೆಕೆರೆ,
ಬಾಲಾಜಿನಗರ, ಬೆಂಗಳೂರು-560 081.
2. ಶ್ರೀ ರಾಮಚಂದ್ರನ್,
ಮೆ: ಜ್ಯೋತಿ ಡೈಯಿಂಗ್ ವರ್ಕ್ಸ್, ಮಾಲೀಕರು,
ನಂ:4, ರಾಮದಾಸ್‌ನರಹರಿ ರಸ್ತೆ, ತಾವರೆಕರೆ.
ಬಾಲಾಜಿನಗರ, ಬೆಂಗಳೂರು-560 081.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 27.3.2001 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀಮತಿ ಲಲಿತಮ್ಮ, ವಯಸ್ಸು 45 ವರ್ಷ, ಬಾಲಾಜಿನಗರ, ತಾವರೆಕೆರೆ, ಬೆಂಗಳೂರು-560 081 ಅವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ಉಪ ವಿಭಾಗ-6, ಬೆಂಗಳೂರು.

ಪಿ.ಆರ್. 1081

**ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಡಬ್ಲ್ಯೂಸಿಎ:ಸಿಆರ್:11:ಎಫ್‌ಸಿ: 2003-420 ದಿನಾಂಕ: 5ನೇ ಸೆಪ್ಟೆಂಬರ್ 2003**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶ್ರೀಮತಿ ಸುಗಂಧಿ ರಮೇಶ್ ಶೇರಿಗಾರ್
2. ಮಾ: ಆದರ್ಶ ರಮೇಶ್ ಶೇರಿಗಾರ್
3. ಮಾ: ಆಶೀಫ್ ರಮೇಶ್ ಶೇರಿಗಾರ್
**ವಾಸ:** ಲಕ್ಕಿಬೆಟ್ಟುಹೌಸ್,
ಕೆರ್ವಸೆ ಅಂಚೆ ಮತ್ತು ಗ್ರಾಮ, ಕಾರ್ಕಳ

1. ಶ್ರೀಮತಿ ಜ್ಯೋತಿ ರಮೇಶ್ ಚೆಲ್ಲಾನಿ,
ಬ್ಲಾಕ್ ಸಂ.72/272 ಗುರುದ್ವಾರ ಎದುರು,
ಉದ್ಭವನಗರ-3
ಕಲ್ಯಾಣಿ ಜಿಲ್ಲೆ, ಮಹರಾಷ್ಟ್ರ
2. ದಿ. ಯುನೈಟೆಡ್ ಇಂಡಿಯಾ
ಇನ್ಸೂರೆನ್ಸ್ ಕಂ. ತಾನೆ.

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ ಸುಗಂಧಿ ರಮೇಶ್ ಶೇರಿಗಾರ ಇವರು ತಮ್ಮ ಗಂಡನಾದ: ರಮೇಶ್ ಅನೂಪ ಶೇರಿಗಾರ್ ಇವರು ಪ್ರತಿವಾದಿಗಳಾದ ಶ್ರೀಮತಿ ಜ್ಯೋತಿ ರಮೇಶ್ ಚೆಲ್ಲಾನಿ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತಾಗಿದ್ದಾಗ ದಿನಾಂಕ 14.1.1999 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

**ಹೆಚ್. ಪಿ. ಜ್ಞಾನೇಶ್**
ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು,
ಮತ್ತು ಕಾರ್ಮಿಕ ಅಧಿಕಾರಿ (ಪ್ರಭಾರ).

ಪಿ.ಆರ್. 1082

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ: 337:ಡಿಟಿಸಿಆರ್: 2001-2002 ದಿನಾಂಕ: 5ನೇ ಸೆಪ್ಟೆಂಬರ್ 2003**

**ಉಪಸ್ಥಿತರು: ಗೋವಿಂದಪ್ಪ**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದ.ಕ.ಜಿಲ್ಲೆ. ಮಂಗಳೂರು.

**ಫಿರ್ಯಾದುದಾರರು** **ವಿರುದ್ಧ** **ಆರೋಪಿಗಳು**

ಅಬಕಾರಿ ನಿರೀಕ್ಷಕರು,
ನಂ.3, ಅಬಕಾರಿ ಗುಪ್ತ ವಾರ್ತಾದಳ,
ಮಂಗಳೂರು ವಿಭಾಗ, ಮಂಗಳೂರು

1. ನಾಗರಾಜ್, (27 ವರ್ಷ)
ಬಿನ್: ಜವರೇಗೌಡ
ಮೊಸಳೆ ಹೊಸಹಳ್ಳಿ ಗ್ರಾಮ ಮತ್ತು ಅಂಚೆ
ಹಾಸನ ಜಿಲ್ಲೆ (ಲಾರಿ ಚಾಲಕ)

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 28.1.2002 ರಂದು ಅಪರಾಹ್ನ ಸುಮಾರು 2.30 ಗಂಟೆ ಸಮಯದಲ್ಲಿ ಫಿರ್ಯಾದುದಾರರು ಅಬಕಾರಿ ಉಪ ಅಧೀಕ್ಷಕರು, ಮಂಗಳೂರು ವಿಭಾಗದ ನೇತೃತ್ವದಲ್ಲಿ ಇಲಾಖೆ ಜೀಪಿನಲ್ಲಿ ತಮ್ಮ ಸಿಬ್ಬಂದಿ ಸಮೇತ ಮಂಗಳೂರು ನಗರದ ರಾಷ್ಟ್ರೀಯ ಹೆದ್ದಾರಿ ಸಂ: 48 ರಲ್ಲಿ ರಸ್ತೆ ಗಾವಲು ನಡೆಸಿ ಹಿಂದಕ್ಕೆ ಬರುತ್ತಿರುವಾಗ ಪಡೀಲ್-ಕುಲಶೇಖರ, ನೀಡಿಲ್ ಗೋರ್ಕಣ ಮುಖ್ಯ ರಸ್ತೆಯ ಮರೋಳಿ ರಸ್ತೆಯ ಎಡಭಾಗದಲ್ಲಿ ಲಾರಿ ನೋಂದಣಿ ಸಂ: ಸಿಎನ್‌ಜಿ 6805 ನಿಂತಿದ್ದು ಅನುಮಾನದಿಂದ ಲಾರಿಯ ಚಾಲಕನಲ್ಲಿ ವಿಚಾರಿಸಿದಾಗ ಅವನು ಯಾವುದೇ ಉತ್ತರವನ್ನು ನೀಡದೇ ಹಾಗೂ ದಾಖಲೆ ಪತ್ರಗಳನ್ನು ಹಾಜರುಪಡಿಸದೇ ಇದ್ದ ಕಾರಣ ಇದರಿಂದ ಇನ್ನು ಅನುಮಾನಗೊಂಡು ಲಾರಿಯಲ್ಲಿದ್ದ ಸರಕನ್ನು ಪರಿಶೀಲಿಸಿದಾಗ ಮದ್ಯ ತುಂಬಿದ ರಟ್ಟಿನ ಪೆಟ್ಟಿಗೆಗಳು ಇರುವುದು ಕಂಡು ಬಂತು. ನಂತರ ಪಂಚರನ್ನು ಬರಮಾಡಿಕೊಂಡು ಅವರಿಗೆ ವಿಷಯವನ್ನು ತಿಳಿಸಿ ಲಾರಿ ಚಾಲಕನ ಹೆಸರು ಮತ್ತು ವಿಳಾಸ ಕೇಳಲಾಗಿ ತಾನು ನಾಗರಾಜ್, (27 ವರ್ಷ) ಬಿನ್: ಜವರೇಗೌಡ, ಮೊಸಳೆ ಹೊಸಹಳ್ಳಿ ಗ್ರಾಮ ಮತ್ತು ಅಂಚೆ ಹಾಸನ ಜಿಲ್ಲೆ ಎಂದು ತಿಳಿಸಿದನು. ನಂತರ ಲಾರಿ ಶೋಧನೆ ಬಗ್ಗೆ ನ್ಯಾಯಾಲಯದ ವಾರೆಂಟ್ ಪಡೆಯಲು ಕಾಲಾವಕಾಶ ವಿಲ್ಲದ ಕಾರಣ ಸರ್ಚ್ ಮೆಮೋವನ್ನು ತಯಾರಿಸಿ ಪಂಚರ ಸಮಕ್ಷಮ ಲಾರಿಯಲ್ಲಿದ್ದ ಮದ್ಯವನ್ನು ಪರಿಶೀಲಿಸಿದಾಗ ಅವುಗಳು ಈ ಕೆಳಗಿನಂತಿವೆ.

| ಮದ್ಯದ ಹೆಸರು | 750 ಎಂಎಲ್‌ನ | 375 ಎಂಎಲ್‌ನ | 180 ಎಂಎಲ್‌ನ | ಲೀಟರುಗಳು |
|---|---|---|---|---|
| ಸೀಸೆಗಳಲ್ಲಿ | | | | |
| ಫಿಲಿಫ್ ಪೈನ್ ವಿಸ್ಕಿ | 1176 | 2352 | 9600 | 3492.00 |
| ಖೋಡೆಸ್ ತ್ರಿಬಲ್ ಎಕ್ಸ್ ರಂ | 1140 | -- | 4704 | 1701.720 |
| | | | ಒಟ್ಟು | 5193.720 |

ಸದರಿ ಮದ್ಯದಿಂದ ರಾಸಾಯನಿಕ ಪರೀಕ್ಷೆಗಾಗಿ 750 ಎಂಎಲ್‌ನ 4 ಸೀಸೆಗಳು 375, ಎಂಎಲ್‌ನ 2 ಸೀಸೆಗಳು, 180 ಎಂಎಲ್‌ನ 6 ಸೀಸೆಗಳನ್ನು ಮಾದರಿಯಾಗಿ ತೆಗೆದುಕೊಂಡು ಸೀಸೆಗಳ ಮೇಲೆ ಬಟ್ಟೆ ದಾರದಿಂದ ಸುತ್ತಿ ಇಲಾಖಾ ಸೀಲಿನಿಂದ ಸೀಲು ಮಾಡಿ ಮಾದರಿ ಸೀಲನ್ನು ತಯಾರಿಸಿ ಗುರುತಿನ ಚೀಟಿಗಳನ್ನು ಬರೆದು ಮಾದರಿ ಸೀಸೆಗಳಿಗೆ ಅಂಟಿಸಿರುತ್ತಾರೆ. ನಂತರ ಸದರಿ ಲಾರಿಯನ್ನು ಪರಿಶೀಲಿಸಿದಾಗ ಲಾರಿಯ ನೋಂದಣಿ ನಂ: ಸಿಎನ್‌ಜಿ: 6805 ಆಗಿದ್ದು ಇದರ ಚಾಸೀಸ್ ನಂ: 344052216945 ಆಗಿದ್ದು ಇಂಜಿನ್ ನಂ: ಸ್ಪಷ್ಟವಾಗಿಲ್ಲದೇ ಮೇಲ್ನೋಟಕ್ಕೆ 3121881102: ಎಸ್‌ಎಫ್‌ಎ-12-ಜೆಓ-57 ಎಂದು ಕಂಡು ಬರುತ್ತದೆ. ಮಹಜರನ್ನು ಸ್ಥಳದಲ್ಲಿಯೇ ಬರೆದು ಸೊತ್ತುಗಳನ್ನು ತಮ್ಮ ವಶಕ್ಕೆ ವಶಪಡಿಸಿಕೊಂಡಿರುತ್ತಾರೆ. ಇದು ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 11,14 ರರೀತ್ಯಾ ಉಲ್ಲಂಘನೆಯಾಗಿದ್ದು, ಕಲಂ 32,34, ಮತ್ತು 38 (ಎ)ರಂತೆ ಶಿಕ್ಷಾರ್ಹವಾಗಿರುವ ಕಾರಣ ಮೊಕದ್ದಮೆ ಸಂ: 15/2001-02 ದಿನಾಂಕ: 28.1.2002 ರಂದು ಮೊಕದ್ದಮೆಯನ್ನು ದಾಖಲಿಸಿ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸೊತ್ತುಗಳನ್ನು ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯರವರಿಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ ಇವರು ಪ್ರಕರಣದ ತನಿಖೆಯನ್ನು ಮುಂದುವರಿಸಿ ಪ್ರಕರಣದಲ್ಲಿ ಜಪ್ತುಗೊಳಿಸಲಾದ ಮದ್ಯದ ಮಾದರಿ ಸೀಸೆಗಳನ್ನು ವಿಶ್ಲೇಷಣೆಗಾಗಿ ರಾಸಾಯನಿಕ ತಜ್ಞರಿಗೆ ಒಳಪಡಿಸಿ ರಾಸಾಯನಿಕ ತಜ್ಞರಿಂದ ವಿಶ್ಲೇಷಣೆ ವರದಿಯನ್ನು ಪಡೆದಿರುತ್ತಾರೆ. ರಾಸಾಯನಿಕ ತಜ್ಞರ ವರದಿಯಂತೆ ಮಾದರಿಯು ಮದ್ಯವೆಂದು, ಇದು ಮಾನವನ ಸೇವನೆಗೆ ಯೋಗ್ಯವಾಗಿದೆಯೆಂದು ಅಭಿಪ್ರಾಯದ ಮೇರೆಗೆ ಈ ಪ್ರಕರಣದಲ್ಲಿ ಜಪ್ತು ಪಡಿಸಿರುವ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಅಬಕಾರಿ ನಿರೀಕ್ಷಕರು, ನೀಡಿದ ಶಿಫಾರಸ್ಸಿನ ಮೇರೆಗೆ ಈ ಪ್ರಾಧಿಕಾರವು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮದ್ಯವನ್ನು ವಿಲೇವಾರಿ ಮಾಡಲು ಆದೇಶ ಸಂ: ಎಸ್‌ಡಿಕೆ: 337: ಡಿಟಿಸಿಆರ್: 2001-02 ದಿನಾಂಕ: 19.02.2002 ರಂದು ಆದೇಶ ನೀಡಿರುತ್ತದೆ.

ಜಪ್ತು ಪಡಿಸಲಾದ ವಾಹನದ ಮಾಲಿಕರ ಹೆಸರು ಮತ್ತು ವಿಳಾಸಗಳ ವಿವರಗಳನ್ನು ಪಡೆಯಲು ಈ ಪ್ರಾಧಿಕಾರವು ಸಾರಿಗೆ ಅಧಿಕಾರಿಗಳು ಕೋರಮಂಗಲ ಬೆಂಗಳೂರು, ದ.ಕ. ಜಿಲ್ಲೆ, ಉಡುಪಿ ಜಿಲ್ಲೆ ಹಾಗೂ ಪುತ್ತೂರು ಮತ್ತು ಹಾಸನ ಜಿಲ್ಲೆಗಳಿಗೆ ಪತ್ರ ಬರೆದು ಸಾರಿಗೆ ಅಧಿಕಾರಿಗಳು ಹಾಸನ ಜಿಲ್ಲೆ ಇವರು ನೀಡಿರುವ ದಿನಾಂಕ: 13.8.2003 ರ ವರದಿಯಂತೆ ಜಪ್ತುಪಡಿಸಿರುವ ವಾಹನವು ಎಂ.ಎನ್. ಚಂದ್ರ. ಬಿನ್: ನಂಜೇಗೌಡ. ಶಶಿ ಪ್ರೊವಿಜನ್, ಬಿ.ಎಂ.ರಸ್ತೆ, ಹಾಸನ ಇವರಿಗೆ ಸೇರಿದ್ದು, ಇವರು ವಾಹನದ ಮಾಲಿಕರಾಗಿರುತ್ತಾರೆ. ಈ ಪ್ರಾಧಿಕಾರವು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 "ಬಿ" ರ ಅಡಿಯಲ್ಲಿ ವಾಹನ ಮಾಲೀಕರಿಗೆ ಕಾರಣ ಕೇಳಿ ನೋಟೀಸು ನೀಡಿದ್ದು ಅದು ಜಾರಿಯಾಗದೆ ಹಿಂದೆ ಬಂದಿರುತ್ತದೆ. ಅಲ್ಲದೇ ಈ ವಾಹನವನ್ನು ಅಕ್ರಮ ಮದ್ಯದೊಂದಿಗೆ ಜಪ್ತು ಪಡಿಸುವ ಸಮಯದಲ್ಲಿ ಹಾಜರಿದ್ದ ಅಪರಾಧಿಯಾದ ನಾಗರಾಜ ಬಿನ್: ಜವರೇಗೌಡ, ಮೊಸಳೆ ಹೊಸಹಳ್ಳಿ ಗ್ರಾಮ ಮತ್ತು ಅಂಚೆ, ಹಾಸನ ಜಿಲ್ಲೆ ಇವರಿಗೂ ಸಹ ಕಾರಣ ಕೇಳಿ ನೋಟೀಸನ್ನು ಈ ಪ್ರಾಧಿಕಾರವು ದಿನಾಂಕ: 2.8.2003 ರಂದು ನೀಡಿದ್ದು ಸದರಿ ಕಾರಣ ಕೇಳಿ ನೀಡಿದ್ದ ನೋಟೀಸು ಜಾರಿಯಾಗದೆ ಹಿಂದೆ ಬಂದಿರುತ್ತದೆ.

ಈ ಪ್ರಕರಣವನ್ನು ಪತ್ತೆ ಹಚ್ಚಿ ವಾಹನವನ್ನು ಜಪ್ತುಗೊಳಿಸಿ ಸುಮಾರು 1 ವರ್ಷ 8 ತಿಂಗಳು ಕಳೆದಿದ್ದರೂ, ಈವರೆಗೆ ಯಾವುದೇ ವ್ಯಕ್ತಿಯು ಈ ವಾಹನವು ತನ್ನದೆಂದು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷ್ಯಧಾರಗಳೊಂದಿಗೆ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಮತ್ತು ಕಾರಣ ಕೇಳಿ ನೋಟೀಸು ನೀಡಲಾದ ನೋಟೀಸುಗಳು ಜಾರಿಯಾಗದೇ ಹಿಂದೆ ಬಂದಿರುತ್ತದೆ. ಈ ಕಾರಣದಿಂದ ವಾಹನ ಮಾಲೀಕನು ತನ್ನ ತಿಳುವಳಿಕೆಯಿಂದಲೇ ಸ್ವತಹ ತಾನೇ ಈ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾನೆ ಎಂದು ಭಾವಿಸಬೇಕಾಗುತ್ತದೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43 ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಪಡಿಸುವಾಗ ಅಪರಾಧಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿ ಒಂದು ತಿಂಗಳ ಅವಧಿಯಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದ್ರಿ ಸ್ವತ್ತುಗಳು ತಮ್ಮವೆಂದು, ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಅರ್ಜಿಯನ್ನು ಸಲ್ಲಿಸದಿದ್ದಲ್ಲಿ ಸದ್ರಿ ಸ್ವತ್ತುಗಳು, ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43 ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸ್ವತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43 (ಸಿ)ರ ಅಡಿಯಲ್ಲಿ ಜಪ್ತುಪಡಿಸಿದ ಅಕ್ರಮ ಮದ್ಯವನ್ನು ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಸದರಿ ಪ್ರಕರಣವು ದಾಖಲಾಗಿ ಸುಮಾರು 1 ವರ್ಷ 8 ತಿಂಗಳು ಕಳೆದಿದ್ದರೂ, ಈವರೆಗೆ ಯಾವುದೇ ವ್ಯಕ್ತಿಯು ವಾಹನ ಮತ್ತು ಮದ್ಯವನ್ನು ತನ್ನದೆಂದು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷ್ಯಧಾರಗಳೊಂದಿಗೆ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಅಲ್ಲದೇ ಕಾರಣ ಕೇಳಿ ನೋಟೀಸು ನೀಡಲಾದ ನೋಟೀಸುಗಳು ಜಾರಿಯಾಗದೇ ಹಿಂದೆ ಬಂದಿದ್ದು ಕಾನೂನು ಬಾಹಿರ ಕೃತ್ಯವನ್ನು ವಾಹನ ಮಾಲೀಕನು ತನ್ನ ತಿಳುವಳಿಕೆಯಿಂದಲೇ ಎಸಗಿರುತ್ತಾನೆ ಎಂದು ಗ್ರಹಿಸಬೇಕಾಗುತ್ತದೆ. ಅಲ್ಲದೇ ದಿನಾಂಕ: 28.1.2002 ರಂದು ಅಬಕಾರಿ ನಿರೀಕ್ಷಕರು, ನಂ. 3 ಇ.ಐ.ಬಿ. ಮಂಗಳೂರು ವಿಭಾಗ, ಮಂಗಳೂರು ಇವರು ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗುವುದನ್ನು ಪತ್ತೆ ಹಚ್ಚಿ ಸ್ಥಳ ಮಹಜರಿನೊಂದಿಗೆ ಅಕ್ರಮ ಮದ್ಯ ಹಾಗೂ ವಾಹನವನ್ನು ವಶಪಡಿಸಿಕೊಂಡಿರುತ್ತಾರೆ, ಮತ್ತು ಮೊಕದ್ದಮೆಯನ್ನು ದಾಖಲೆ ಪಡಿಸಿರುತ್ತಾರೆ. ದಾಖಲೆಗಳನ್ನು ಮಾನ್ಯ ನ್ಯಾಯಾಲಯಕ್ಕೂ ಹಾಗೂ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಜಪ್ತು ಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ ಅದು ಮದ್ಯವೆಂದು ದೃಢಪಟ್ಟಿರುತ್ತದೆ. ಈ ಮೇಲಿನ ಕಾರಣ ಪುರಾವೆ ಮತ್ತು ಲಭ್ಯವಿರುವ ಸಾಕ್ಷ್ಯಧಾರಗಳಿಂದ ಈ ವಾಹನವನ್ನು ಅಕ್ರಮ ಮದ್ಯ ಸಾಗಾಣಿಕೆಗೆ ಬಳಸಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಲಾಗಿ ವಾಹನದಲ್ಲಿ ಅಕ್ರಮ ಮದ್ಯವು ಸಾಗಾಣಿಕೆಯಾಗಿರುವುದು ದೃಢಪಟ್ಟಿರುತ್ತದೆ. ಅಲ್ಲದೇ ವಾಹನವನ್ನು ತೆರೆದ ಜಾಗದಲ್ಲಿ ನಿಲ್ಲಿಸಿದ್ದು, ಅದು ಬಿಸಿಲು ಮಳೆ ಮುಂತಾದ ಹವಾಮಾನ ವೈಪರೀತ್ಯದಿಂದ ದಿನೇ ದಿನೇ ತನ್ನ ಗುಣಮಟ್ಟವನ್ನು ಕಳೆದುಕೊಂಡು ಅದರ ಮೌಲ್ಯವು ಕಡಿಮೆಯಾಗುವ ಸಾಧ್ಯತೆಯಿರುವುದರಿಂದ ಸರ್ಕಾರದ ಆದಾಯದ ಹಿತ ದೃಷ್ಟಿಯಿಂದ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರವು ತೀರ್ಮಾನಿಸಿ ಈ ಆದೇಶ.

## ಆದೇಶ

ಗೋವಿಂದಪ್ಪ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43 (ಎ)ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43 (ಬಿ) ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43 (ಸಿ) ರನ್ವಯ ಅಬಕಾರಿ ನಿರೀಕ್ಷಕರು, ನಂ. 3 ಅಬಕಾರಿ ಗುಪ್ತ ವಾರ್ತಾದಳ ಮಂಗಳೂರು ವಿಭಾಗ, ಮಂಗಳೂರುರವರ ಮೊಕದ್ದಮೆ ಸಂಖ್ಯೆ: 15/ 2001-02 ದಿನಾಂಕ: 28.1.2002 ರಲ್ಲಿ ವಶಪಡಿಸಿಕೊಂಡಿರುವ ಲಾರಿ ಸಂ:ಸಿಎನ್‌ಜಿ:6805 ನ್ನು (ಚಾಸೀಸ್ ನಂ: 344052194142, ಇಂಜಿನ್‌ನಂ:692-ಡಿ-02-202002) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 5.09.2003 ರಂದು ಶೀಘ್ರ ಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪತ್ರಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದ.ಕ. ಜಿಲ್ಲೆ. ಮಂಗಳೂರು.

ಪಿ. ಆರ್.1083

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ,
ಮಂಗಳೂರು ಇವರ ನ್ಯಾಯಾಲಯದಲ್ಲಿ

ನಂಬ್ರ: ಎಸ್‌ಡಿಕೆ: 328:ಡಿಟಿಸಿಆರ್: 2001-2002 ದಿನಾಂಕ: 27ನೇ ಆಗಸ್ಟ್ 2003

**ಉಪಸ್ಥಿತರು: ಗೋವಿಂದಪ್ಪ**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು.

**ಫಿರ್ಯಾದುದಾರರು**
ಪೊಲೀಸು ಉಪ ನಿರೀಕ್ಷಕರು
ಉಳ್ಳಾಲ ಪೊಲೀಸು ಠಾಣೆ, ಉಳ್ಳಾಲ

**ವಿರುದ್ಧ**

**ಆರೋಪಿಗಳು**
1. ರವಿ ಪ್ರಾಯ: 29, ಬಿನ್ ನೀಲಕಂಠಯ್ಯ
ಮೂಲ್ಯ, ವರ್ಕಾಡಿ, ಸುಂಕದಕಟ್ಟೆ, ಮಂಜೇಶ್ವರ
ಕಾಸರಗೋಡ್, ಕೇರಳ,
ಹಾಲಿ: ನಿತ್ಯಾನಂದ ನಗರ, ದೇರಳಕಟ್ಟೆ, ಮಂಗಳೂರು.
2. ಶೈಲೇಶ್ ಪ್ರಾಯ: 30, ಬಿನ್ ಗೋಪಾಲ
ವಾಸ: ಮಂಜಪ್ಪ ಕಂಪೌಂಡ್, ಮನೆ: ಬಿಜೈ,
ಮಂಗಳೂರು.

**ವಾಹನ ಮಾಲೀಕರು**
ರವಿ ಬಿನ್ ನೀಲಕಂಠ, ನಿತ್ಯಾನಗರ ಪೋಸ್ಟ್,
ಬೆಳ್ಮ, ದೇರಳಕಟ್ಟೆ, ಮಂಗಳೂರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 10.1.2002 ರಂದು ಫಿರ್ಯಾದುದಾರರು ತಮ್ಮ ಸಿಬ್ಬಂದಿಗಳೊಂದಿಗೆ ಮಂಗಳೂರು ತಾಲೂಕು, ತಲಪಾಡಿ ಗ್ರಾಮದ ತಲಪಾಡಿ ಎಂಬಲ್ಲಿ ದೊರೆತ ಖಚಿತ ವರ್ತಮಾನದ ಮೇರೆಗೆ ಕಾಯುತ್ತಿದ್ದಾಗ ಮಂಗಳೂರು ಕಡೆಯಿಂದ ರಾ.ಹೆ. 17ರಲ್ಲಿ ಅತೀ ವೇಗದಿಂದ ಅಂಬಾಸಿಡರ್ ಕಾರು ಸಂ:ಎಂಇಜಿ: 1821 ಬರುತ್ತಿದ್ದು ಸಂಶಯದ ಆಧಾರದ ಮೇಲೆ ನಿಲ್ಲಿಸಲು ಸೂಚನೆ ನೀಡಿದಾಗ ಸದ್ರಿ ಕಾರಿನ ಚಾಲಕ ಹಾಗೂ ಸಹಾಯಕ ಸದ್ರಿ ಕಾರನ್ನು ನಿಲ್ಲಿಸದೇ ಅತೀ ವೇಗವಾಗಿ ಚಲಾಯಿಸಿಕೊಂಡು ಹೋಗಲು ಪೊಲೀಸರು ತಮ್ಮ ಇಲಾಖಾ ಜೀಪಿನಲ್ಲಿ ಸದ್ರಿ ಅಂಬಾಸಿಡರ್ ಕಾರನ್ನು ಬೆನ್ನಟ್ಟಿ ತಲಪಾಡಿ ಆಹಾರ ಹಾಗೂ ಮೋಟಾರು ವಾಹನ ತಪಾಸಣೆ ಕೇಂದ್ರದ ಮುಂದೆ ನಿಲ್ಲಿಸಿ, ಸದ್ರಿ ಕಾರಿನ ಚಾಲಕ ಹಾಗೂ ಸಹಚಾಲಕರಲ್ಲಿ ಸಾಗಾಣಿಕೆ ಮಾಡುತ್ತಿದ್ದ ಸರಕು ಯಾವುದು ಎಂದು ವಿಚಾರಿಸಿದಾಗ ಅವರು ಸಮರ್ಪಕವಾದ ಉತ್ತರವನ್ನು ನೀಡದ ಕಾರಣ, ಅವರ ಸಮಕ್ಷಮ ಸದ್ರಿ ಕಾರನ್ನು ಪರಿಶೀಲಿಸಿದಾಗ ಕಾರಿನ ಹಿಂಬದಿ ದೇಶ್ ಬೋರ್ಡಿನಲ್ಲಿ ಹಾಗೂ ಚಾಲಕನ ಹಿಂಬದಿಯ ಸೀಟಿನಲ್ಲಿ ಮತ್ತು 2 ಹೆಡ್‌ಲೈಟ್ ಒಳಗಡೆ ಡೂಮ್‌ನಲ್ಲಿ ವಿಶೇಷವಾಗಿ ನಿರ್ಮಿಸಿದ ಸ್ಥಳಗಳಲ್ಲಿ ನಂ:1 ಹೈವೇ ಫೈನ್ ವಿಸ್ಕಿ ಲೇಬಲ್ ಹೊಂದಿದ್ದ 750 ಎಂಎಲ್ ಮತ್ತು 375 ಎಂಎಲ್‌ನ ಸೀಸೆಗಳು ಕಂಡು ಬಂದವು. ಸದ್ರಿ ಮದ್ಯವನ್ನು ಸಾಗಾಣಿಕೆ ಮಾಡಲು ಯಾವುದೇ ರಹದಾರಿ ಪತ್ರವನ್ನು ಹಾಜರುಪಡಿಸದ ಕಾರಣ ಹಾಗೂ ಮದ್ಯವನ್ನು ಅಕ್ರಮವಾಗಿ ಕರ್ನಾಟಕ ರಾಜ್ಯದಿಂದ ಕೇರಳಕ್ಕೆ ಸಾಗಾಣಿಕೆ ಮಾಡುತ್ತಿರುವುದು ದೃಢಪಟ್ಟ ಹಿನ್ನೆಲೆಯಲ್ಲಿ ಅವರಿಬ್ಬರ ಹೆಸರು ಮತ್ತು ವಿಳಾಸ ಕೇಳಲಾಗಿ ಚಾಲಕ ತನ್ನ ಹೆಸರು ರವಿ ಬಿನ್: ನೀಲಕಂಠ ಮೂಲ್ಯ, ವರ್ಕಾಡಿ, ಸುಂಕದಕಟ್ಟೆ, ಮಂಜೇಶ್ವರ, ಕಾಸರಗೋಡ್, ಕೇರಳ, ಹಾಲಿ: ನಿತ್ಯಾನಂದ ನಗರ, ಬೆಳ್ಮ ದೇರಳಕಟ್ಟೆ, ಮಂಗಳೂರು ಹಾಗೂ ಸಹಾಯಕ ತನ್ನ ಹೆಸರು ಶೈಲೇಶ್, ಬಿನ್: ಗೋಪಾಲ, ಮಂಜಪ್ಪ ಕಂಪೌಂಡ್, ಬಿಜೈ, ಮಂಗಳೂರು ಎಂಬುವುದಾಗಿ ತಿಳಿಸಿರುತ್ತಾರೆ. ನಂತರ ಸದರಿ ಕಾರಿನಲ್ಲಿದ್ದ ಮದ್ಯವನ್ನು ಪರಿಶೀಲಿಸಿದಾಗ ಹೈವೇ ನಂ:1 ವಿಸ್ಕಿ ಲೇಬಲ್ ಹೊಂದಿದ 750 ಎಂಎಲ್‌ನ 54 ಸೀಸೆಗಳು ಹಾಗೂ 375 ಎಂಎಲ್‌ನ 240 ಸೀಸೆಗಳು ಇರುವುದು ಕಂಡು ಬಂತು. ಸದ್ರಿ ಮದ್ಯದಿಂದ ತಲಾ ಒಂದೊಂದು ಬಾಟ್ಲಿಯನ್ನು ತೆಗೆದಿರಿಸಿ ಬಿಳಿ ಬಟ್ಟೆಯಿಂದ ಕಟ್ಟಿ ಎಸ್.ಎಚ್.ಒ. ಮೊಹರು ಮಾಡಿ ತನಿಖಾಧಿಕಾರಿ ಹಾಗೂ ಸಾಕ್ಷಿದಾರರ ಲೇಬಲ್‌ನ್ನು ಅಂಟಿಸಿ 750 ಎಂಎಲ್‌ನ ಬಾಟ್ಲಿಗೆ 'ಎ' ಎಂದು ಹಾಗೂ 375 ಎಂಎಲ್‌ನ ಬಾಟ್ಲಿಗೆ 'ಬಿ' ಎಂದು ಗುರುತಿಸಿರುತ್ತಾರೆ. ಪ್ರಕರಣದಲ್ಲಿ ಜಪ್ತಿ ಮಾಡಲ್ಪಟ್ಟ ಮದ್ಯ ಹಾಗೂ ಸಾಗಾಣಿಕೆ ಮಾಡುತ್ತಿದ್ದ ಅಂಬಾಸಿಡರ್ ಕಾರನ್ನು ಸ್ಯಾಂಪಲ್ ಸೀಸೆಗಳನ್ನು ಮುಂದಿನ ನಡವಳಿಕೆ ಬಗ್ಗೆ ಇಲಾಖಾ ವಶಕ್ಕೆ ತೆಗೆದುಕೊಂಡಿರುತ್ತಾರೆ. ಇದು ಅಕ್ರಮ ಮದ್ಯ ಸಾಗಾಟವೆಂದು ದೃಢಪಡಿಸಿ ಹಾಜರಿದ್ದ ಅಪರಾಧಿಗಳನ್ನು ದಸ್ತಗಿರಿ ಮಾಡಿ ದೊರೆತ ಮದ್ಯ ಮತ್ತು ವಾಹನವನ್ನು ವಶಪಡಿಸಿಕೊಂಡು ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ.

ಸದರಿ ಪ್ರಕರಣಕ್ಕೆ ಸಂಬಂಧಪಟ್ಟ ಪಂಚನಾಮೆ ಪ್ರತಿ, ಪ್ರಥಮ ಮಾಹಿತಿ ವರದಿ ಪ್ರತಿ ಹಾಗೂ ಸೊತ್ತಿನ ಪಟ್ಟಿಯ ಪ್ರತಿಯನ್ನು ಫಿರ್ಯಾದಿನೊಂದಿಗೆ ಪ್ರಾಧಿಕಾರಕ್ಕೆ ಸಲ್ಲಿಸಿ, ಪ್ರಾಧಿಕಾರದ ಅನುಮತಿಯಂತೆ ಪ್ರಕರಣದ ಸೊತ್ತುಗಳನ್ನು ಹಾಗೂ ದಾಖಲೇ ಪತ್ರಗಳನ್ನು ಮುಂದಿನ ತನಿಖೆ ಬಗ್ಗೆ ಅಬಕಾರಿ ನಿರೀಕ್ಷಕರು ಉಳ್ಳಾಲ ವಲಯಕ್ಕೆ ಹಸ್ತಾಂತರಿಸಿರುತ್ತಾರೆ.

ಈ ಪ್ರಕರಣದಲ್ಲಿ ತೆಗೆದಿರಿಸಲಾಗಿರುವ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೊಳಪಡಿಸಿದ್ದು ರಾಸಾಯನಿಕ ತಜ್ಞರ ವರದಿಯಂತೆ ಮಾದರಿ ಸೀಸೆಗಳಲ್ಲಿದ್ದ ದ್ರವ್ಯವು ಮದ್ಯವೆಂದು ಮಾನವ ಸೇವನೆಗೆ ಯೋಗ್ಯವಾಗಿರುವುದಾಗಿ ದೃಢಪಟ್ಟಿರುತ್ತದೆ. ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ಮದ್ಯವನ್ನು ಯಾರು ವಾರಸುದಾರರು ಇಲ್ಲದ ಕಾರಣ ದಿನಾಂಕ: 15.3.2002 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಆದೇಶ ನೀಡಲಾಗಿರುತ್ತದೆ.

ಅಬಕಾರಿ ನಿರೀಕ್ಷಕರು ಉಳ್ಳಾಲ ವಲಯ ಇವರು ತನಿಖೆಯನ್ನು ಮುಂದುವರಿಸಿ ದಿನಾಂಕ: 10.7.2002ರ ತನಿಖಾ ವರದಿಯಲ್ಲಿ ಈ ಪ್ರಾಧಿಕಾರಕ್ಕೆ ಜಪ್ತುಪಡಿಸಲಾದ ವಾಹನ ಮಾಲೀಕರ ಹೆಸರು ಮತ್ತು ವಿಳಾಸದ ಮಾಹಿತಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸುತ್ತಾ, ಸದ್ರಿ ವಾಹನದ ಮಾಲೀಕರು ಸಾರಿಗೆ ಅಧಿಕಾರಿಗಳು, ದ.ಕ. ಜಿಲ್ಲೆ, ಮಂಗಳೂರುರವರ ವರದಿಯಂತೆ ರವಿ, ಬಿನ್: ನೀಲಕಂಠ, ನಿತ್ಯಾನಂದ ನಗರ ಅಂಚೆ, ಬೆಳ್ಮ, ದೇರಳಕಟ್ಟೆ, ಮಂಗಳೂರು ತಾಲ್ಲೂಕು ಎಂದು ಅವರಿಗೆ ವಲಯ ಕಛೇರಿಯಿಂದ ನೋಟೀಸು ನೀಡಿದ್ದು, ಈವರೆಗೂ ಯಾವುದೇ ವ್ಯಕ್ತಿಯು ವಾಹನವನ್ನು ತನ್ನದೆಂದು ಹಕ್ಕನ್ನು ಚಲಾಯಿಸಿ ಬಂದಿಲ್ಲವೆಂದು ವಾಹನವನ್ನು ತೆರೆದ ಜಾಗದಲ್ಲಿ ನಿಲ್ಲಿಸಿದ್ದು ಅದುಹವಾಮಾನ ವೈಪರೀತ್ಯದಿಂದಾಗಿ ಹಾಳಾಗುವ ಸಾಧ್ಯತೆ ಇದ್ದು ಇದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ವರದಿ ಸಲ್ಲಿಸಿರುತ್ತಾರೆ.

ಈ ಪ್ರಾಧಿಕಾರವು ವಾಹನ ಮಾಲೀಕರಾದ ರವಿ, ಬಿನ್ ನೀಲಕಂಠ ಇವರಿಗೆ ದಿನಾಂಕ: 18.1.2003 ರಂದು ಕಾರಣ ಕೇಳಿ ನೋಟೀಸನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಬಿ ರೀತ್ಯಾ ನೀಡಿರುತ್ತದೆ. ಆದರೆ, ಸದ್ರಿ ನೋಟಿಸ್ ಜಾರಿಯಾಗದೆ ಹಿಂದೆ ಬಂದಿರುತ್ತದೆ. ಅಲ್ಲದೆ, ವಾಹನವನ್ನು ಜಪ್ತಿಪಡಿಸಿ ಈಗಾಗಲೆ 1 ವರ್ಷ 7 ತಿಂಗಳು ಕಳೆದರೂ ಯಾವುದೇ ವ್ಯಕ್ತಿಯು ವಾಹನವು ತನ್ನದೆಂದು ಕೋರಿ ವಾಹನ ಬಿಡುಗಡೆಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43 ರಡಿಯಲ್ಲಿ ಪ್ರಕರಣವನ್ನು ದಾಖಲುಪಡಿಸಿದಾಗ ಪ್ರಕರಣವನ್ನು ಪತ್ತೆ ಹಚ್ಚಿ 1 ತಿಂಗಳೊಳಗೆ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದ್ರಿ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನುಬದ್ಧವಾಗಿದೆ ಎಂದು ಸಾಕ್ಷ್ಯಾಧಾರಗಳೊಂದಿಗೆ ಹಾಜರುಪಡಿಸದೆ ಇದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43 ರಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳುವ ವಸ್ತುಗಳಾಗಿದ್ದಲ್ಲಿ ಅವುಗಳನ್ನು ಕಲಂ 43ಸಿ ಅಡಿಯಲ್ಲಿ ಪ್ರಾಧಿಕಾರವು ಅಕ್ರಮ ಮದ್ಯವನ್ನು ಸಾಗಾಣಿಕೆಗೆ ಬಳಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಪ್ರಕರಣವು ದಾಖಲಾಗಿ ಸುಮಾರು 1 ವರ್ಷ 7 ತಿಂಗಳು ಕಳೆದಿದ್ದರೂ ಈ ಪ್ರಕರಣದಲ್ಲಿ ಜಪ್ತಿಪಡಿಸಿರುವ ವಾಹನವು ತನ್ನದೆಂದು ಕೋರಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಅಲ್ಲದೆ, ಸದ್ರಿ ಪ್ರಕರಣದಲ್ಲಿ ದಸ್ತಗಿರಿಯಾಗಿರುವ ಆರೋಪಿಯು ರವಿ ಬಿನ್: ನೀಲಕಂಠ ಎಂದು ಸಾರಿಗೆ ಅಧಿಕಾರಿಗಳ ವರದಿಯಂತೆ ಅವರೇ ವಾಹನ ಮಾಲೀಕರಾಗಿರುವುದು ದೃಢಪಟ್ಟಿರುತ್ತದೆ. ಮತ್ತು ವಾಹನ ಮಾಲೀಕರು ಸ್ವತಃ ಈ ಅಕ್ರಮ ಕಾನೂನು ಬಾಹಿರ ಕೃತ್ಯವನ್ನು ಎಸಗಿರುವುದು ಲಭ್ಯವಿರುವ ದಾಖಲಾತಿಗಳಿಂದ ವೇದ್ಯವಾಗುತ್ತದೆ. ಅಲ್ಲದೆ ವಾಹನ ಮಾಲೀಕರು ತಾನೇ ಸ್ವತಃ ಕಾನೂನು ಬಾಹಿರ ಕೃತ್ಯವನ್ನು ಎಸಗಿದ್ದು, ಪ್ರಕರಣವು ದಾಖಲಾಗಿ ಒಂದು ವರ್ಷ 7 ತಿಂಗಳು ಕಳೆದಿದ್ದರೂ ಈ ಪ್ರಾಧಿಕಾರದ ಮುಂದೆ ಹಾಜರಾಗದೆ ಇದ್ದು ಈ ಪ್ರಾಧಿಕಾರವು ನೀಡಿದ ಕಾರಣ ಕೇಳಿ ನೋಟೀಸ್, ಜಾರಿ ಆಗದೆ ಹಿಂದೆ ಬಂದಿರುವುದರಿಂದ ವಾಹನ ಮಾಲೀಕರು ತನ್ನ ತಿಳುವಳಿಕೆಯಿಂದ ಅಕ್ರಮ ಮದ್ಯ ಸಾಗಾಣಿಕೆಯನ್ನು ಸ್ವತಃ ಮಾಡಿರುತ್ತಾರೆ ಎಂಬುದು ಸ್ಪಷ್ಟವಾಗಿ ಸಾಬೀತಾಗಿರುತ್ತದೆ. ಜಪ್ತಿಪಡಿಸಿರುವ ವಾಹನವನ್ನು ತೆರೆದ ಜಾಗದಲ್ಲಿ ನಿಲ್ಲಿಸಿದ್ದು ಬಿಸಿಲು, ಮಳೆ, ಗಾಳಿ ಮುಂತಾದ ಹವಾಮಾನ ವೈಪರೀತ್ಯದಿಂದ ದಿನೇ ದಿನೇ ವಾಹನದ ಗುಣಮಟ್ಟವು ಕಡಿಮೆಯಾಗುವ ಸಂಭವವಿದ್ದು ಸರ್ಕಾರದ ಆದಾಯದ ಹಿತ ದೃಷ್ಟಿಯಿಂದ ಸದ್ರಿ ಅಂಬಾಸಿಡರ್ ಕಾರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೆಂಬ ಹಿನ್ನೆಲೆಯಲ್ಲಿ ಈ ಆದೇಶ.

**ಆದೇಶ**

ಗೋವಿಂದಪ್ಪ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಜ್ ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43ಎ ನಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43ಬಿ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43 (ಸಿ) ರನ್ವಯ ಮೊಕದ್ದಮೆ ಸಂ:5:2002 ದಿನಾಂಕ: 10.1.02 ರಂದು ಪೊಲೀಸ್ ಉಪ ನಿರೀಕ್ಷಕರು, ಉಳ್ಳಾಲ ಪೊಲೀಸ್ ಠಾಣೆ, ಉಳ್ಳಾಲರವರು ಜಪ್ತಿ ಮಾಡಿರುವ ಅಂಬಾಸಿಡರ್ ಕಾರು ಸಂ: ಎಂಇಜಿ-1821ನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಸಿ ಅನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 27.8.2003 ರಂದು ಬೆರಳಚ್ಚು ಮಾಡಿ ಬೆರಳಚ್ಚು ಮಾಡಿದ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಗೋವಿಂದಪ್ಪ**

ಪಿ. ಆರ್.1084

ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದ.ಕ. ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂಬ್ರ: ಎಸ್‌ಡಿಕೆ: 491:ಡಿಟಿಸಿಆರ್: 2001-2002 ದಿನಾಂಕ: 29ನೇ ಆಗಸ್ಟ್, 2003**

**ಉಪಸ್ಥಿತರು: ಗೋವಿಂದಪ್ಪ**

ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿಗಳು** |
|---|---|---|
| ಅಬಕಾರಿ ಉಪ ನಿರೀಕ್ಷಕರು,<br>ನಂ. 4, ಇಐಬಿ, ಮಂಗಳೂರು ವಿಭಾಗ,<br>ಮಂಗಳೂರು. | | ಆರೋಪಿಗಳು ಪರಾರಿಯಾಗಿರುತ್ತಾರೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 12.6.2002 ರಂದು ರಾತ್ರಿ ಸುಮಾರು 8.15 ಗಂಟೆ ಸಮಯದಲ್ಲಿ ಫಿರ್ಯಾದುದಾರರು ಅಬಕಾರಿ ಉಪ ಅಧೀಕ್ಷಕರು ಗುಪ್ತ ವಾರ್ತಾದಳ, ಮಂಗಳೂರು ವಿಭಾಗದ ನೇತೃತ್ವದಲ್ಲಿ ಇಲಾಖೆ ಜೀಪಿನಲ್ಲಿ ತಮ್ಮ ಸಿಬ್ಬಂದಿ ಸಮೇತ ಮಂಗಳೂರು ನಗರ ಜಪ್ಪಿನಮೊಗರು ಗ್ರಾಮದ ಪಂಪ್‌ವೆಲ್ ತೊಕ್ಕೊಟು ರಾಷ್ಟ್ರೀಯ ಹೆದ್ದಾರಿ ಸಂ: 17 ರಲ್ಲಿ ನೇತ್ರಾವತಿ ಸೇತುವೆಯ ಬಳಿ ರಸ್ತೆ ಗಸ್ತು ತಿರುಗುತ್ತಿರುವಾಗ ರಾಷ್ಟ್ರೀಯ ಹೆದ್ದಾರಿ 17 ರಲ್ಲಿ ಒಂದು ಮೋಟಾರು ಸೈಕಲ್ ಅತೀ ವೇಗವಾಗಿ ಬರುತ್ತಿರುವುದನ್ನು ಕಂಡು ಸಿಬ್ಬಂದಿಯವರು ನಿಲ್ಲಿಸಲು ಸೂಚನೆ ನೀಡಿದಾಗ ಅದರಲ್ಲಿ ಇಬ್ಬರು ವ್ಯಕ್ತಿಗಳು ಕುಳಿತಿದ್ದು, ಸದರಿ ಮೋಟಾರು ಸೈಕಲನ್ನು ನೇತ್ರಾವತಿ ಸೇತುವೆ ಬಳಿ ರಸ್ತೆಯ ಬದಿಯಲ್ಲಿಯೇ ಬಿಟ್ಟು ಓಡಿ ಹೋಗಿ ಕತ್ತಲಲ್ಲಿ ಕಣ್ಮರೆಯಾಗಿರುತ್ತಾರೆ. ನಂತರ ಮೋಟಾರು ಸೈಕಲ್‌ನ್ನು ಪರಿಶೀಲಿಸಿದಾಗ ಅದು ಯಮಹಾ ಮೋಟಾರು ಸೈಕಲ್ ಆಗಿದ್ದು ಅದರ ನೋಂದಣಿ ಸಂ: ಕೆಎ19-ಹೆಚ್-9920 ಹಾಗೂ ಚಾಸೀಸ್ ನಂ: 96 ಎಫ್‌ಐಎಲ್: 5008182, ಇಂಜಿನ್‌ನಂ: ಡಿಎಲ್:5008182 ಆಗಿದ್ದು ಇದಕ್ಕೆ ಸಂಬಂಧಿಸಿದ ಯಾವುದೇ ದಾಖಲಾತಿಗಳು ದೊರೆತಿರುವುದಿಲ್ಲ. ಸದರಿ ಮೋಟಾರು ಸೈಕಲಿನ ಹ್ಯಾಂಡಲಿಗೆ ನೇತಾಡಿಸಿಕೊಂಡಿರುವ ಒಂದು ನೈಲಾನ್ ಚೀಲದೊಳಗೆ 10.000 ಲೀಟರು ಗ್ರಾತದ ಒಂದು ಕಪ್ಪು ಬಣ್ಣದ ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಸುಮಾರು 10.000 ಲೀಟರು ಕಳ್ಳಭಟ್ಟಿ ಸಾರಾಯಿ ತುಂಬಿರುವುದು ಕಂಡು ಬಂತು. ಅಲ್ಲೇ ಹಾಜರಿರುವ ಸಾಕ್ಷಿದಾರರ ಸಮಕ್ಷಮದಲ್ಲಿ ಪ್ರತಿ ಕ್ಯಾನಿನಲ್ಲಿದ್ದ ಸಾರಾಯಿಯಿಂದ 180 ಎಂಎಲ್‌ನ ಸಾರಾಯಿಯನ್ನು ರಾಸಾಯನಿಕ ಪರೀಕ್ಷೆಗೆ ತೆಗೆದು ಒಂದು ಚಿಕ್ಕ ಶೀಶೆಗೆ ತುಂಬಿಸಿ ಅದರ ಬಾಯಿಗೆ ಬಟ್ಟೆಯಿಂದ ಕಟ್ಟಿ ಇಲಾಖಾ ಸೀಲಿನಿಂದ ಸೀಲು ಮಾಡಿರುತ್ತಾರೆ. ಆರೋಪಿಗಳು ಯಾರು ಪತ್ತೆಯಾಗದ ಕಾರಣ ಅಕ್ರಮವಾಗಿ 10.000 ಲೀಟರು ಕಳ್ಳಭಟ್ಟಿ ಸಾರಾಯಿಯನ್ನು ಸಾಗಾಣಿಕೆಗೆ ಬಳಸಿದ್ದ ಯಮಹಾ ಮೋಟಾರು ಸೈಕಲ್ ಸಂ: ಕೆಎ19-ಹೆಚ್-9920ನ್ನು ಸ್ಥಳ ಮಹಜರಿನ ಮೂಲಕ ಇಲಾಖಾ ವಶಕ್ಕೆ ವಶಪಡಿಸಿಕೊಂಡು ಮೊಕದ್ದಮೆ ಸಂ: 41/2001-02 ರಂತೆ ಮೊಕದ್ದಮೆಯನ್ನು ದಾಖಲಿಸಿರುತ್ತಾರೆ. ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸೊತ್ತುಗಳನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ಅಬಕಾರಿ ನಿರೀಕ್ಷಕರು, ಉಳ್ಳಾಲ ವಲಯರವರಿಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ನೀರಿಕ್ಷಕರು, ಉಳ್ಳಾಲ ವಲಯರವರು, ಪ್ರಕರಣದ ತನಿಖೆಯನ್ನು ಮುಂದುವರಿಸಿ ರಾಸಾಯನಿಕ ತಜ್ಞರ ವರದಿಯನ್ನು ಪಡೆದು ವಾಹನ ಮಾಲೀಕರ ಹೆಸರು ಮತ್ತು ವಿಳಾಸವನ್ನು ಸಾರಿಗೆ ಅಧಿಕಾರಿಗಳಿಂದ ಪಡೆದಿರುತ್ತಾರೆ. ಅಬಕಾರಿ ನಿರೀಕ್ಷಕರು ಈ ಪ್ರಾಧಿಕಾರಕ್ಕೆ ದಿನಾಂಕ: 22.01.2003 ರಂದು ವರದಿಯನ್ನು ಸಲ್ಲಿಸುತ್ತಾ ಈ ಪ್ರಕರಣದಲ್ಲಿ ಜಪ್ತಿಗೊಳಿಸಲಾಗಿರುವ ವಾಹನದ ಮಾಲೀಕರ ಹೆಸರು ಹಾಗೂ ವಿಳಾಸವನ್ನು ಸಾರಿಗೆ ಅಧಿಕಾರಿಗಳಿಂದ ಪಡೆದಿದ್ದು ಸದರಿ ವಾಹನ ಮಾಲೀಕರಾದ ಶ್ರೀ ರವಿ. ಎಂ. ಡಿಸೋಜಾ ಬಿನ್: ಫ್ರೆಡಿಕ್ ಡಿಸೋಜಾ ಆಡಂಕುದ್ರು, ಪೆರ್ಮನ್ನೂರು ಗ್ರಾಮ ಮಂಗಳೂರು ಎಂಬವರಿಗೆ ಸೇರಿದ್ದು ಸದರಿಯವರಿಗೆ ದಿನಾಂಕ: 6.1.2003 ರಂದು ನೋಟೀಸನ್ನು ಜಾರಿ ಮಾಡಿದ್ದು ಈ ವರೆಗೆ ಯಾವುದೇ ವ್ಯಕ್ತಿಯು ವಾಹನವನ್ನು ಕೋರಿ ತಮ್ಮ ಕಛೇರಿಗೆ ಬರುವುದಿಲ್ಲವೆಂದು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ತಮ್ಮ ತನಿಖಾ ವರದಿ ಸಲ್ಲಿಸಿರುತ್ತಾರೆ.

ಈ ಪ್ರಾಧಿಕಾರವು ದಿನಾಂಕ: 16.1.2003 ರಂದು ವಾಹನ ಮಾಲೀಕರಿಗೆ ಕಾರಣ ಕೇಳಿ ನೋಟೀಸನ್ನು ನೋಂದಾಣಿ ಅಂಚೆ ಮೂಲಕ ನೀಡಿರುತ್ತಾರೆ. ಮತ್ತು ಸದರಿ ಕಾರಣ ಕೇಳಿ ನೀಡಿದ ನೋಟೀಸು ದಿನಾಂಕ: 24.1.2003 ರಂದು ವಾಹನ ಮಾಲೀಕರಿಗೆ ಜಾರಿಯಾಗಿದ್ದು ಸದರಿ ನೋಟೀಸಿನ ಸ್ವೀಕೃತಿ ಪತ್ರ ಈ ಪ್ರಾಧಿಕಾರಕ್ಕೆ ತಲುಪಿರುತ್ತದೆ. ಈ ಪ್ರಾಧಿಕಾರವು ನೀಡಿರುವ ಕಾರಣ ಕೇಳಿ ನೋಟೀಸನ್ನು ವಾಹನ ಮಾಲೀಕರು ಪಡೆದಿದ್ದು ಈ ವರೆಗೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನವನ್ನು ಕೋರಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43 ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಪಡಿಸುವಾಗ ಅಪರಾಧಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿ ಒಂದು ತಿಂಗಳ ಅವಧಿಯಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದ್ರಿ ಸ್ವತ್ತುಗಳು ತಮ್ಮವೆಂದು, ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷಾಧಾರಗಳೊಂದಿಗೆ ಅರ್ಜಿಯನ್ನು ಸಲ್ಲಿಸದಿದ್ದಲ್ಲಿ ಸದ್ರಿ ಸ್ವತ್ತುಗಳು, ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43 ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸ್ವತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43 (ಸಿ)ರ ಅಡಿಯಲ್ಲಿ ಜಪ್ತುಪಡಿಸಿದ್ದ ಅಕ್ರಮ ಸಾರಾಯಿಯನ್ನು ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಈ ಪ್ರಕರಣವು ದಾಖಲಾಗಿ ಸುಮಾರು 1 ವರ್ಷ 3 ತಿಂಗಳೂ ಕಳೆದಿದ್ದರೂ, ಈವರೆಗೆ ಯಾವುದೇ ವ್ಯಕ್ತಿಯು ಈ ವಾಹನವು ತನ್ನದೆಂದು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ ಮತ್ತು ಜಪ್ತಿಪಡಿಸಲಾಗಿರುವ ವಾಹನ ಮಾಲೀಕರಿಗೆ ಈ ಪ್ರಾಧಿಕಾರವು ನೀಡಿರುವ ನೋಟೀಸನ್ನು ಪಡೆದಿದ್ದರೂ ನೋಟೀಸು ಪಡೆದು 7 ತಿಂಗಳುಗಳಾಗಿದ್ದರೂ ವಾಹನ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದನ್ನು ನೋಡಿದಾಗ ವಾಹನ ಮಾಲೀಕರೇ ಸ್ವತಹ ಈ ಅಕ್ರಮ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾರೆಂದು ವೇದ್ಯವಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿ, ಸ್ಥಳ ಮಹಜರು ಪ್ರಥಮ ಮಾಹಿತಿ ವರದಿ, ರಾಸಾಯನಿಕ ತಜ್ಞರ ವರದಿ ಮುಂತಾದುವುಗಳನ್ನು ಪರಿಶೀಲನೆ ಮಾಡಿದ್ದಲ್ಲಿ ದಿನಾಂಕ: 12.6.2002 ರಂದು ವಾಹನದಲ್ಲಿ ಆರೋಪಿಯು ಅಕ್ರಮವಾಗಿ 10.000 ಲೀಟರು ಅಕ್ರಮ ಸಾರಾಯಿಯನ್ನು ಸಾಗಣೆಕೆಯಾಗಿರುವುದು ಮೇಲುನೋಟಕ್ಕೆ ಸಾಬೀತಾಗಿರುತ್ತದೆ.

ಅಲ್ಲದೇ ವಾಹನ ಮಾಲೀಕರು ಈ ಪ್ರಾಧಿಕಾರದಿಂದ ನೀಡಲಾಗಿರುವ ನೋಟೀಸನ್ನು ಪಡೆದಿದ್ದು ಈ ವರೆಗೆ ವಾಹನವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದನ್ನು ಗಮನಿಸಿದರೇ ಅವರು ಈ ಪ್ರಕರಣವನ್ನು ನಡೆಸಲು ಉತ್ಸುಕರಿಲ್ಲವೆಂದು ಸ್ವತಹ ವಾಹನ ಮಾಲೀಕರೇ ಈ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾರೆಂದು ಈ ಪ್ರಾಧಿಕಾರವು ತೀರ್ಮಾನಕ್ಕೆ ಬರಬೇಕಾಗುತ್ತದೆ. ವಾಹನವನ್ನು ತೆರೆದ ಜಾಗದಲ್ಲಿಟ್ಟಿದ್ದು ಅದು ಬಿಸಿಲು ಮಳೆ ಮುಂತಾದ ಹವಾಮಾನ ವೈಪರೀತ್ಯಗಳಿಗೆ ದಿನೇ ದಿನೇ ತನ್ನ ಗುಣಮಟ್ಟವನ್ನು ಕಳೆದುಕೊಳ್ಳುವ ಸಂಭವವಿದ್ದು ಅದರ ಮೌಲ್ಯವು ಕಡಿಮೆ ಯಾಗುವ ಸಾಧ್ಯತೆಯಿರುವುದರಿಂದ ಸರ್ಕಾರದ ಆದಾಯದ ಹಿತ ದೃಷ್ಟಿಯಿಂದ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೆಂದು ಸೂಕ್ತವೆಂದು ಈ ಪ್ರಾಧಿಕಾರವು ತೀರ್ಮಾನಿಸಿ ಈ ಆದೇಶ.

**ಆದೇಶ**

ಗೋವಿಂದಪ್ಪ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43 (ಎ)ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43 (ಬಿ) ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43 (ಸಿ) ರನ್ವಯ ಅಬಕಾರಿ ಉಪ ನಿರೀಕ್ಷಕರು, ನಂ: 4 ಇ.ಐ.ಬಿ. ಮಂಗಳೂರು ವಿಭಾಗ, ಮಂಗಳೂರುರವರ ಮೊಕದ್ದಮೆ ಸಂಖ್ಯೆ: 41/2001-02 ದಿನಾಂಕ: 12.06.2002 ರಲ್ಲಿ ವಶಪಡಿಸಿಕೊಂಡಿರುವ ಯಮಹಾ ಮೋಟಾರು ಸೈಕಲ್ ಸಂ:ಕೆಎ19-ಹೆಚ್-9920 ನ್ನು (ಚಾಸೀಸ್ ನಂ:96 ಎಫ್‌ಐಎಲ್:5008182, ಇಂಜಿನ್ ನಂ: ಡಿಎಲ್:5008182) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 29.8.2003 ರಂದು ಶೀಘ್ರ ಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಗೋವಿಂದಪ್ಪ**

ಪಿ. ಆರ್.1085

ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ. ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ:394:ಡಿಟಿಸಿಆರ್: 2001-2002 ದಿನಾಂಕ: 4ನೇ ಸೆಪ್ಟೆಂಬರ್ 2003**

**ಉಪಸ್ಥಿತರು: ಗೋವಿಂದಪ್ಪ**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿಗಳು** |
|---|---|---|
| ಶ್ರೀ ಕೃಷ್ಣ ನ್ಯಾಕ್, | 1. | ಅಶೋಕ್ ಪೆರಾವೊ |
| ಅಬಕಾರಿ ಉಪ ನಿರೀಕ್ಷಕರು, | | ಸನ್ ಆಫ್: ಐರಿನ್ ಪೆರಾವೊ |
| ಗುಪ್ತ ವಾರ್ತಾದಳ, ಮಂಗಳೂರು ವಿಭಾಗ, | | ಮದರ್ ಹೌಸ್, ಕಲ್ಲಾಪು, |
| ಮಂಗಳೂರು | | ಪೆರ್ಮನ್ನೂರು ಪೋಸ್ಟ್, ಮಂಗಳೂರು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 16.3.2002 ರಂದು ಮಂಗಳೂರು ಗಪ್ತ ವಾರ್ತಾದಳದ ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ತಾಲ್ಲೂಕು ಪೆರ್ಮನ್ನೂರು ಗ್ರಾಮದಲ್ಲಿ ಕಲ್ಲಾಪು ಎಂಬಲ್ಲಿ ರಾತ್ರಿ 10.30ಕ್ಕೆ ಗಸ್ತು ತಿರುಗುತ್ತಿದ್ದಾಗ ಕಲ್ಲಾಪು ಕಡೆಯಿಂದ ರಾಷ್ಟ್ರೀಯ ಹೆದ್ದಾರಿ 17ರ ಕಡೆಗೆ ಹೋಗುವ ತಿರುವಿನಲ್ಲಿ ಒಂದು ಹೀರೊ ಹೊಂಡಾ ಮೋಟಾರು ಸೈಕಲ್ ಸಂಖ್ಯೆ: ಕೆಎ-19ಎಲ್-7501 ರಲ್ಲಿ ಅತೀ ವೇಗದಿಂದ ಬರುತ್ತಿದ್ದು ಸಂಶಯದಿಂದ ಅದನ್ನು ನಿಲ್ಲಿಸಲು ಸೂಚನೆ ನೀಡಿದಾಗ ನಿಲ್ಲಿಸದೆ ಮುಂದೆ ಹೋಗಿ ಅದರಲ್ಲಿದ್ದ ಇಬ್ಬರು ವ್ಯಕ್ತಿಗಳು ಮೋಟಾರು ಸೈಕಲನ್ನು ಅಲ್ಲೇ ಬಿಟ್ಟು ಓಡಿಹೋದರೆಂದು ಮೋಟಾರು ಸೈಕಲನ್ನು ಚಲಾಯಿಸುತ್ತಿರುವವನು ತನಗೆ ಪರಿಚಿತನಾಗಿದ್ದನೆಂದು ಮೋಟಾರು ಸೈಕಲಿನ ಹಿಂದಿನ ವ್ಯಕ್ತಿ ಎರಡು ಕಪ್ಪು ಬಣ್ಣದ ರಬ್ಬರ್ ಟ್ಯೂಬ್‌ಗಳನ್ನು ಹಿಡಿದುಕೊಂಡು ಕುಳಿತಿದ್ದನು ಎಂದು ತಿಳಿಸಿರುತ್ತಾರೆ. ಸದ್ರಿ ಮೋಟಾರು ಸೈಕಲನ್ನು ಪರಿಶೀಲನೆ ಮಾಡಲು ಅದು ಕಪ್ಪು ಬಣ್ಣದ ಕೆಎ-19ಎಲ್-7501 ನೋಂದಣಿಯ ಹೀರೊ ಹೊಂಡಾ ಸೈಕಲಾಗಿದ್ದು ಅದರ ಮೇಲೆ ಇದ್ದ ಎರಡು ರಬ್ಬರ್ ಟ್ಯೂಬ್‌ಗಳನ್ನು ಪರಿಶೀಲಿಸಲಾಗಿ ಅವುಗಳಲ್ಲಿ ತಲಾ 40 ಲೀಟರ್‌ನಂತೆ ಒಟ್ಟು 80 ಲೀಟರ್ ಕಳ್ಳಭಟ್ಟಿ ಸಾರಾಯಿ ಇದ್ದು ಇದು ಅಕ್ರಮ ಕಳ್ಳಭಟ್ಟಿ ಸಾಗಾಣಿಕೆ ಆಗಿದ್ದು, ಪಂಚರ ಸಮಕ್ಷಮ ರಾಸಾಯನಿಕ ಮಾದರಿಗಾಗಿ ಎರಡು ಟ್ಯೂಬ್‌ಗಳಿಂದ ಎರಡು ಸೀಸೆ ಮಾದರಿ ತೆಗೆದು ಸೀಸೆಗಳಿಗೂ ಮತ್ತು ರಬ್ಬರ್ ಟ್ಯೂಬ್‌ಗಳಿಗೂ ಬಟ್ಟೆದಾರ ಕಟ್ಟಿ ಇಲಾಖಾ ಸೀಲಿನಿಂದ ಸೀಲು ಮಾಡಿ ಗುರುತಿನ ಚೀಟಿಗಳನ್ನು ಅಂಟಿಸಿ ಸ್ಥಳದಲ್ಲೇ ಮಹಜರು ತಯಾರಿಸಿ ದೊರೆತ ವಸ್ತುಗಳನ್ನು ವಾಹನದೊಂದಿಗೆ ಇಲಾಖೆಗೆ ವಶಪಡಿಸಿಕೊಂಡು ಕಛೇರಿಗೆ ಬಂದು ಅಬಕಾರಿ ಕಾಯಿದೆ ಕಲಂ 11, 14, 32, 34 ಮತ್ತು 38(ಎ)ರ ಪ್ರಕಾರ ಮೊಕದ್ದಮೆಯನ್ನು ಮೊಕದ್ದಮೆ ಸಂಖ್ಯೆ:25:2001-02ರ ಮೂಲಕ ದಾಖಲುಪಡಿಸಿ ಪ್ರಥಮ ಮಾಹಿತಿ ವರದಿಯನ್ನು ಮತ್ತು ಮಹಜರನ್ನು ನ್ಯಾಯಾಲಯಕ್ಕೂ ಮತ್ತು ಈ ಪ್ರಾಧಿಕಾರಕ್ಕೂ

ಸಲ್ಲಿಸಿರುತ್ತಾರೆ ಈ ಪ್ರಾಧಿಕಾರದ ಅನುಮತಿಯಂತೆ ಮೊಕದ್ದಮೆಯನ್ನು ಸೊತ್ತುಗಳೊಂದಿಗೆ ಅಬಕಾರಿ ನಿರೀಕ್ಷಕರು, ಉಳ್ಳಾಲ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ದಿನಾಂಕ: 02.04.2002 ರಂದು ಈ ಪ್ರಕರಣದಲ್ಲಿ ಜಪ್ತಿಪಡಿಸಲಾಗಿರುವ ವಾಹನದ ಮಾಲೀಕರು ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿ ವಾಹನದ ಮಧ್ಯಂತರ ಬಿಡುಗಡೆಗೆ ಕೋರಿರುತ್ತಾರೆ. ಅವರ ಕೋರಿಕೆಯಂತೆ ಈ ಪ್ರಾಧಿಕಾರವು ರೂ.30,000/- ಬ್ಯಾಂಕ್ ಗ್ಯಾರಂಟಿ ಮತ್ತು ಇನ್ನಿತರ ಷರತ್ತುಗಳೊಂದಿಗೆ ವಾಹನವನ್ನು ವಾಹನ ಮಾಲೀಕರ ಮಧ್ಯಂತರ ಬಿಡುಗಡೆಗೆ ದಿನಾಂಕ: 29.7.2002 ರಂದು ಆದೇಶ ನೀಡಿರುತ್ತದೆ. ಅದರಂತೆ, ವಾಹನ ಮಾಲೀಕರು ಬ್ಯಾಂಕ್ ಗ್ಯಾರಂಟಿ ಸಲ್ಲಿಸಿ ಅವರ ವಾಹನವನ್ನು ತಮ್ಮ ಮಧ್ಯಂತರ ವಶಕ್ಕೆ ಪಡೆದುಕೊಂಡಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ ಸರ್ಕಾರದ ಅಭಿಯೋಜನೆ ಪರ ಮೂರು ಸಾಕ್ಷಿಗಳನ್ನು, ಪ್ರತಿರಕ್ಷಾ ಪರ ಎರಡು ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಿ ಅವರುಗಳ ಹೇಳಿಕೆಯನ್ನು ಪಡೆಯಲಾಗಿದೆ. ಈ ಪ್ರಕರಣದಲ್ಲಿ ಸರ್ಕಾರದ ಪರ ಹಾಗೂ ವಾಹನ ಮಾಲೀಕರ ಪರ ಸಲ್ಲಿಸಿರುವ ಸಾಕ್ಷ್ಯಾಧಾರದ ಮೇಲೆ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತವೆ.

1. ದಿನಾಂಕ: 16.3.2002 ರಂದು ವಾಹನ ಮೋಟಾರ್ ಸೈಕಲ್ ಸಂಖ್ಯೆ: ಕೆಎ-19ಎಲ್-7501 ರಲ್ಲಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಣೆ ಮಾಡಲಾಗಿತ್ತೇ?
2. ಸದ್ರಿ ವಾಹನದಲ್ಲಿ ಕಳ್ಳಭಟ್ಟಿ ಸಾರಾಯಿಯನ್ನು ತನ್ನ ತಿಳುವಳಿಕೆಗೆ ಬಾರದೆ ಮಾಡಲಾಗಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತು ಪಡಿಸಿದ್ದಾರೆಯೇ?
3. ಜಪ್ತಿಪಡಿಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷಿಯ ಆಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದು, ಎರಡನೇ ಅಂಶವನ್ನು ನಕರಾತ್ಮಕವಾಗಿ ಇಲ್ಲವೆಂದು ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ.1:**

ಅಬಕಾರಿ ಉಪ ನಿರೀಕ್ಷಕರು, ಗುಪ್ತ ವಾರ್ತಾದಳ, ಮಂಗಳೂರು ಇವರು ಈ ಪ್ರಕರಣದ ಫಿರ್ಯಾದುದಾರರಾಗಿದ್ದು ದಿನಾಂಕ: 15.12.2002 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡಿರುತ್ತಾರೆ. ದಿನಾಂಕ: 16.3.2002 ರಂದು ರಾತ್ರಿ 10.30ರ ಸಮಯದಲ್ಲಿ ಮಂಗಳೂರಿನ ಪೆರ್ಮನ್ನೂರು ಗ್ರಾಮದ ರಾಷ್ಟ್ರೀಯ ಹೆದ್ದಾರಿ ನಂ: 17 ರಲ್ಲಿ ಕಲ್ಲಾಪು ಎಂಬಲ್ಲಿ ಗಸ್ತು ತಿರುಗುತ್ತಿದ್ದಾಗ ಕಲ್ಲಾಪುವಿನಿಂದ ಹೆದ್ದಾರಿಗೆ ಒಂದು ಮೋಟಾರು ಸೈಕಲ್ ಅತೀ ವೇಗದಿಂದ ಬರುತ್ತಿದ್ದು ಸಂಶಯದಿಂದ ಅದನ್ನು ನಿಲ್ಲಿಸಲು ಸೂಚನೆ ನೀಡಿದಾಗ ಅದನ್ನು ನಿಲ್ಲಿಸದೆ ಮುಂದೆ ಸಾಗಿ ಮೋಟಾರ್ ಸೈಕಲನ್ನು ಬಿಟ್ಟು ಸವಾರುದಾರರು ಓಡಿ ಹೋದರು. ಈ ವಾಹನದಲ್ಲಿ ಎರಡು ಜನರು ಇದ್ದು, ಅವರಲ್ಲಿ ಒಬ್ಬ ವ್ಯಕ್ತಿಯನ್ನು ಗುರುತಿಸಿರುತ್ತೇನೆ. ಇನ್ನೊಬ್ಬ ರಬ್ಬರ್ ಟ್ಯೂಬ್‌ಗಳನ್ನು ಹಿಡಿದುಕೊಂಡಿದ್ದನ್ನು ನೋಡಿದೆನು ಎಂದು ತಿಳಿಸಿರುತ್ತಾರೆ. ಸ್ಥಳಕ್ಕೆ ಹೋಗಿ ಮೋಟಾರ್ ಸೈಕಲನ್ನು ಪರಿಶೀಲಿಸಿದಾಗ ಮೋಟಾರ್ ಸೈಕಲ್ ಬಳಿ ಎರಡು ಟ್ಯೂಬ್‌ಗಳಲ್ಲಿ ಕಳ್ಳಭಟ್ಟಿ ಸಾರಾಯಿ ತುಂಬಿರುವುದು ಕಂಡುಬಂತು. ಪ್ರತಿಯೊಂದು ಟ್ಯೂಬ್‌ನಲ್ಲಿಯೂ ತಲಾ 40 ಲೀಟರ್‌ನಷ್ಟು ಸಾರಾಯಿ ಇರುವುದು ಕಂಡು ಬಂದಿರುವುದಾಗಿ ತಿಳಿಸಿರುತ್ತಾರೆ. ಸದ್ರಿ ವಾಹನವು ಹೀರೊ ಹೊಂಡ ಮೋಟಾರ್ ಸೈಕಲ್ ಎಂದು ಅದರ ನೋಂದಣಿ ಸಂಖ್ಯೆ: ಕೆಎ-19ಎಲ್-7501 ಆಗಿದ್ದು, ಸಾರಾಯಿ ಸಾಗಣೆ ಮಾಡುವ ಕುರಿತು ಯಾವುದೇ ದಾಖಲೆ ಪತ್ರಗಳು ಇರಲಿಲ್ಲವೆಂದು ತಿಳಿಸಿರುತ್ತಾರೆ. ನಂತರ ಪ್ರತಿ ಟ್ಯೂಬ್‌ನಿಂದ ರಾಸಾಯನಿಕ ಪರೀಕ್ಷೆಗೆ 2 ಬಾಟ್ಲಿಗಳಲ್ಲಿ ಮಾದರಿ ಸಾರಾಯಿ ತೆಗೆದು ಇಲಾಖಾ ಸೀಲಿನಿಂದ ಸೀಲು ಮಾಡಿ ಸದ್ರಿ ಬಾಟ್ಲಿಗಳಿಗೂ ಹಾಗೂ ಟ್ಯೂಬ್‌ಗಳಿಗೂ ಗುರುತಿನ ಚೀಟಿಯನ್ನು ಅಂಟಿಸಿರುವುದಾಗಿ ತಿಳಿಸಿರುತ್ತಾರೆ. ನಂತರ ಸ್ಥಳದಲ್ಲಿ ಮಹಜರು ತಯಾರಿಸಿ ದೊರೆತ ವಸ್ತುಗಳನ್ನು ವಶಪಡಿಸಿಕೊಂಡು ಅಬಕಾರಿ ಗುಪ್ತ ವಾರ್ತಾದಳದ ಕಛೇರಿಗೆ ತಂದು ಪ್ರಕರಣವನ್ನು ಪ್ರಥಮ ಮಾಹಿತಿ ವರದಿ ಸಂಖ್ಯೆ: 28:2001-02 ದಿನಾಂಕ: 16.3.2002ರ ಮೂಲಕ ದಾಖಲು ಮಾಡಿರುತ್ತಾರೆಂದು ಪ್ರಥಮ ಮಾಹಿತಿ ವರದಿಯನ್ನು ನ್ಯಾಯಾಲಯಕ್ಕೂ ಮತ್ತು ಈ ಪ್ರಾಧಿಕಾರಕ್ಕೂ ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ. ಪ್ರಕರಣದಲ್ಲಿ ವಾಹನ ಮತ್ತು ಸಾರಾಯಿಯನ್ನು ವಶಪಡಿಸಿಕೊಂಡಿರುವ ಬಗ್ಗೆ ವರದಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿದ್ದು ಸದ್ರಿ ವರದಿಯನ್ನು ಗುರುತಿಸಲಾಗಿದೆ. ಅದನ್ನು ನಿಶಾನೆ ಪಿ-1 ಎಂದು, ಪ್ರಕರಣದ ಪ್ರಥಮ ಮಾಹಿತಿ ವರದಿಯ ಪ್ರತಿಯನ್ನು ಗುರುತಿಸಲಾಗಿದ್ದು ಅದನ್ನು ನಿಶಾನೆ ಪಿ-2 ಎಂದು, ಪ್ರಕರಣದ ಸ್ಥಳ ಮಹಜರಿನ ಪ್ರತಿಯನ್ನು ಗುರುತಿಸಿದ್ದು ಅದನ್ನು ನಿಶಾನೆ ಪಿ-3 ಎಂದು, ಗುರುತಿಸಲಾಗಿದೆ. ಈ ಮೊಕದ್ದಮೆಗೆ ಸಂಬಂಧಪಟ್ಟ ದಾಖಲಾತಿ ಮತ್ತು ಸೊತ್ತುಗಳನ್ನು ಉಳ್ಳಾಲ ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲಾಗಿದೆ ಎಂದು ತಿಳಿಸಿರುತ್ತಾರೆ.

ಈ ಸಾಕ್ಷಿದಾರರು ಪಾಟೀ ಸವಾಲಲ್ಲಿ ಕೊಟ್ಟಿರುವ ಹೇಳಿಕೆಗಳನ್ನು ಪರಿಶೀಲಿಸಲಾಗಿ ಮುಖ್ಯ ವಿಚಾರಣೆಯಲ್ಲಿ ಕೊಟ್ಟಿರುವ ಸಾಕ್ಷಿ ಹೇಳಿಕೆಗೆ ವ್ಯತಿರಿಕ್ತವಾಗಿ ಯಾವುದೇ ವಿಷಯವನ್ನು ಹೇಳಿರುವುದಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಬಹುದು. ಮುಖ್ಯ ವಿಚಾರಣೆಯಲ್ಲಿ ವಾಹನದಲ್ಲಿ ಇಬ್ಬರು ಸವಾರುದಾರರಿದ್ದು ಅವರ ಪೈಕಿ ಒಬ್ಬರನ್ನು ಗುರುತಿಸಿರುವುದಾಗಿ ತಿಳಿಸಿರುತ್ತಾರೆ. ಅದಕ್ಕೆ ಪೂರಕವಾಗಿ ಸದ್ರಿಯವರ ವಠಾರಕ್ಕೆ ಪದೇ ಪದೇ ಅಬಕಾರಿ ಧಾಳಿಯನ್ನು ನಡೆಸುತ್ತಿದ್ದ ಕಾರಣ ಆತನ ಪರಿಚಯ ನನಗೆ ಇತ್ತು ಎಂದು ತಿಳಿಸಿರುತ್ತಾರೆ.

ಎದುರುದಾರರ ಪರ ವಕೀಲರು ಕೇಳಿದ ಪ್ರಶ್ನೆಗಳಿಗೆ ಉತ್ತರ ಸಲ್ಲಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದಲ್ಲಿ ಯಾವುದೇ ಕಳ್ಳಭಟ್ಟಿ ಸಾರಾಯಿ ಸಾಗಾಟ ಮಾಡಿಲ್ಲವೆಂಬುದನ್ನು ಅಲ್ಲಗಳೆದಿದ್ದಾರೆ. ಹಾಗೂ ಕಳ್ಳಭಟ್ಟಿ ಸಾರಾಯಿ ಸಾಗಣೆ ಆಗಿರುವುದನ್ನು ದೃಢಪಡಿಸಿರುತ್ತಾರೆ. ಈ ಸಾಕ್ಷಿದಾರರ ಹೇಳಿಕೆಗಳನ್ನು ಪರಿಶೀಲಿಸಿದಾಗ ಅವುಗಳನ್ನು ನಂಬದೇ ಇರಲು ಯಾವುದೇ ಸಕಾರಣ ಇಲ್ಲವೆಂಬ

ಅಭಿಪ್ರಾಯ ವ್ಯಕ್ತಪಡಿಸಿರುತ್ತೇನೆ. ಅದಲ್ಲದೆ ಸ್ಥಳದಲ್ಲಿ ತಯಾರಿಸಿದ ಮಹಜರು ಮತ್ತು ಪ್ರಕರಣದ ಪ್ರಥಮ ಮಾಹಿತಿ ವರದಿಯು ಈ ಸಾಕ್ಷಿದಾರರ ಹೇಳಿಕೆಯನ್ನು ಪುಷ್ಠೀಕರಿಸುತ್ತವೆ.

ಈ ಪ್ರಕರಣದ ತನಿಖಾಧಿಕಾರಿಯಾಗದ ಪ್ರಾ.ಸಾ.2 ಇವರು ದಿನಾಂಕ: 2.1.2003 ರಂದು ಈ ಪ್ರಾಧಿಕಾರದ ಮುಂದೆ ಸಾಕ್ಷಿ ನುಡಿದು ಈ ಪ್ರಕರಣಕ್ಕೆ ಸಂಬಂಧಿಸಿದ ಸೊತ್ತುಗಳನ್ನು ಹಾಗೂ ದಾಖಲೆಗಳನ್ನು ಪಡೆದು ಪ್ರಕರಣದ ತನಿಖೆ ಕೈಗೊಂಡು ತಕ್ಷೀರಿಗೆ ಸಂಬಂಧಿಸಿದ 2 ರಾಸಾಯನಿಕ ಮಾದರಿ ಬಾಟ್ಲಿಗಳನ್ನು ಉಪ ವಲಯದ ಅಬಕಾರಿ ರಕ್ಷಕ ಶ್ರೀ. ಎಂ. ವಿ. ಶೇಟ್ ಇವರ ಮೂಲಕ ರಾಸಾಯನಿಕ ತಜ್ಞರಿಗೆ ಕಳುಹಿಸಿದ್ದು ತದನಂತರ ರಾಸಾಯನಿಕ ವಿಶ್ಲೇಷಣಾ ವರದಿಯನ್ನು ಮತ್ತು ಮಾದರಿ ಸೀಸೆಗಳನ್ನು ದಿನಾಂಕ: 12.4.2002 ರಂದು ತರಿಸಿದ್ದು ಪ್ರಕರಣದ ಅಂತಿಮ ವರದಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ.

**ಪ್ರಾ.ಸಾ.3:**

ಶ್ರೀ ಎಂ. ವಿ. ಶೇಟ್, ಅಬಕಾರಿ ರಕ್ಷಕ ಇವರು ದಿನಾಂಕ: 2.1.2003 ರಂದು ಈ ಪ್ರಾಧಿಕಾರದ ಮುಂದೆ ಸಾಕ್ಷಿ ನುಡಿದಿರುತ್ತಾರೆ. ಇವರು ತಮ್ಮ ಹೇಳಿಕೆಯಲ್ಲಿ ಪ್ರಕರಣಕ್ಕೆ ಸಂಬಂಧಿಸಿದ ಎರಡು ಮಾದರಿ ಸೀಸೆಗಳನ್ನು ಉಳ್ಳಾಲ ಉಪ ವಲಯದ ಉಪ ನಿರೀಕ್ಷಕರಿಂದ ಪಡೆದು ಅವುಗಳನ್ನು ರಾಸಾಯನಿಕ ತಜ್ಞರಿಗೆ ತಲುಪಿಸಿ ನಂತರ ದಿನಾಂಕ: 12.04.2002 ರಂದು ರಾಸಾಯನಿಕ ತಜ್ಞರ ವರದಿಯನ್ನು ಮತ್ತು ಮಾದರಿ ಸೀಸೆಗಳನ್ನು ಪಡೆದು ಉಪ ನಿರೀಕ್ಷಕರಿಗೆ ತಲುಪಿಸಿರುತ್ತಾರೆ. ರಾಸಾಯನಿಕ ವರದಿ ಪ್ರತಿಯನ್ನು ಗುರುತಿಸಿದ್ದು ಅದನ್ನು ನಿಶಾನೆ ಪಿ-4 ಎಂದು ಗುರುತಿಸಲಾಯಿತು. ವರದಿಯನ್ನು ಪರಿಶೀಲಿಸಲಾಗಿ ಮಾದರಿ ಸೀಸೆಯಲ್ಲಿದ್ದ ದ್ರವವು ಮದ್ಯ ಎಂದು ದೃಢಪಟ್ಟಿರುತ್ತದೆ.

ಈ ಮೇಲಿನ ಸಾಕ್ಷ್ಯಾಧಾರಗಳಿಂದ ಹಾಗೂ ವಿವರಿಸಲಾಗಿರುವ ಕಾರಣದಿಂದಾಗಿ ಮತ್ತು ಹಾಜರುಪಡಿಸಿರುವ ದಾಖಲೆಯಿಂದ ಈ ಪ್ರಕರಣದಲ್ಲಿ ಜಪ್ತಿಪಡಿಸಿರುವ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾಗಾಟ ಮಾಡಿರುವುದು ಸ್ಪಷ್ಟವಾಗಿ ಸಾಬೀತಾಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ಮೊದಲನೇ ವಿವಾದಾಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಪ್ರಕರಣದ ಎರಡನೇ ಅಂಶವು ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ವಾಹನದಲ್ಲಿ ವಾಹನ ಮಾಲೀಕರಿಗೆ ತಿಳಿಯದೆ ಈ ಕೃತ್ಯವು ಎಸಗಲ್ಪಟ್ಟಿದೆ ಎಂಬುದನ್ನು ಅರ್ಜಿದಾರರು ಸಾಬೀತುಪಡಿಸಬೇಕಿದ್ದು ಅರ್ಜಿದಾರರ ಪರ ಎರಡು ಸಾಕ್ಷಿಗಳನ್ನು ವಿಚಾರಣೆಗೆ ಹಾಜರುಪಡಿಸಿರುತ್ತಾರೆ. ಅವರುಗಳ ಹೇಳಿಕೆಯನ್ನು ಈ ಪ್ರಾಧಿಕಾರವು ಪಡೆದಿರುತ್ತದೆ.

**ಡಿಡಬ್ಲ್ಯೂ-1:**

ವಾಹನ ಮಾಲೀಕರಾದ ಅಶೋಕ ಪೆರಾವೊ ಇವರು ದಿನಾಂಕ: 20.3.2003 ರಂದು ಈ ಪ್ರಾಧಿಕಾರದ ಮುಂದೆ ಸಾಕ್ಷಿ ನುಡಿಯುತ್ತಾ ದಿನಾಂಕ: 16.3.2002 ರಂದು ಸಂಜೆ 7.00 ಗಂಟೆಗೆ ತಮ್ಮ ವಾಹನವನ್ನು ಕಲ್ಲಾಪುವಿನಲ್ಲಿ ಮಾರ್ಗದ ಬಳಿ ನಿಲ್ಲಿಸಿದ್ದು ಅಬಕಾರಿ ಗುತ್ತಿಗೆದಾರರ ಗೂಂಡಾಗಳು ಬಂದು ತನ್ನ ವಾಹನವನ್ನು ಕೊಂಡು ಹೋಗಲು ಬಂದಾಗ ನಾನು ವಾಹನವನ್ನು ಯಾಕೆ ಕೊಂಡು ಹೋಗುತ್ತೀರಿ ಎಂದು ಪ್ರಶ್ನಿಸಿದೆ ಎಂದು ತಿಳಿಸಿರುತ್ತಾರೆ. ಅದಕ್ಕೆ ಅವರು ವಾಹನದಲ್ಲಿ ಸಾರಾಯಿ ಸಾಗಾಟ ಮಾಡಲಾಗಿದೆ ಎಂದು ಅಧಿಕಾರಿಗಳು ಹೇಳಿದ್ದಾರೆಂದು ಹೇಳಿ ಸದ್ರಿ ವಾಹನವನ್ನು ಉಳ್ಳಾಲ ಅಬಕಾರಿ ನಿರೀಕ್ಷಕರ ಕಛೇರಿಗೆ ಕೊಂಡು ಹೋದರೆಂದು ತಿಳಿಸಿರುತ್ತಾರೆ. ನಂತರ ತಾನು ಅಬಕಾರಿ ಕಛೇರಿಗೆ ಹೋದಾಗ ಬೈಕನ್ನು ನ್ಯಾಯಾಲಯದಿಂದ ಬಿಡಿಸಿಕೊಳ್ಳಬೇಕೆಂದು ಹೇಳಿದರೆಂದು ತಿಳಿಸಿರುತ್ತಾರೆ. ಈ ಸಾಕ್ಷಿ ತನ್ನ ಹೇಳಿಕೆಯಲ್ಲಿ ಸದ್ರಿ ಗುತ್ತಿಗೆದಾರರ ಗೂಂಡಾಗಳ ವಿರುದ್ಧ ದೂರು ಕೊಟ್ಟಿರುವುದಾಗಿ ತಿಳಿಸಿರುತ್ತಾರೆ. ಆದರೆ, ಈ ಸಾಕ್ಷಿದಾರನ ಹೇಳಿಕೆಯನ್ನು ನಂಬಲು ಯಾವುದೇ ಆಧಾರವಿಲ್ಲವೆಂದು ಹೇಳಬಹುದು. ದೂರು ಕೊಟ್ಟಿದ್ದಲ್ಲಿ ಸದ್ರಿ ದೂರು ದಾಖಲೆಯನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಬಹುದಿತ್ತು. ಆದರೆ ಈ ಕುರಿತು ಯಾವುದೇ ದಾಖಲೆಯನ್ನು ಹಾಜರುಪಡಿಸಿರುವುದಿಲ್ಲ. ಅದಲ್ಲದೆ ಈ ಎಲ್ಲಾ ವಿಷಯಗಳನ್ನು ಅರ್ಜಿದಾರರು ತಮ್ಮ ವಾಹನವನ್ನು ಮಧ್ಯಂತರ ಬಿಡುಗಡೆಗಾಗಿ ಕೋರಿ ಸಲ್ಲಿಸಿದ ಅರ್ಜಿಯಲ್ಲಿ ನಮೂದಿಸಿರುವುದಿಲ್ಲ. ಈ ಕಾರಣದಿಂದ ಈ ಸಾಕ್ಷಿದಾರರು ಕೊಟ್ಟ ಹೇಳಿಕೆಗಳು ನಂಬಲನರ್ಹ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತೇನೆ. ಅದಲ್ಲದೆ, ಪಾಟೀ ಸವಾಲಲ್ಲಿ ಕೊಟ್ಟಿರುವ ಹೇಳಿಕೆಗಳನ್ನು ಪರಿಶೀಲಿಸಲಾಗಿ, ಇವರ ಹೇಳಿಕೆಗಳು ಕಾಲ್ಪನಿಕ ಎಂಬುದಾಗಿ ತಿಳಿದು ಬರುತ್ತದೆ.

**ಡಿಡಬ್ಲ್ಯೂ-2:**

ಡಿಡಬ್ಲ್ಯೂ-2 ಇವರ ಪ್ರವೀಣ್ ಮೊಂತೆರೊ ಎಂಬುವವರು ಈ ಪ್ರಾಧಿಕಾರದ ಮುಂದೆ ಸಾಕ್ಷಿ ನುಡಿದಿದ್ದು, ಡಿಡಬ್ಲ್ಯೂ-1 ಇವರ ಹೇಳಿಕೆಗೆ ಪೂರಕವಾಗಿ ಹೇಳಿರುತ್ತಾರಾದರೂ ಸಾಕ್ಷಿದಾರರ ಹೇಳಿಕೆಯನ್ನು ನಂಬದಿರಲು ಸಾಕಷ್ಟು ಕಾರಣವಿರುತ್ತದೆ. ಇವರು ತಮ್ಮ ಹೇಳಿಕೆಯಲ್ಲಿ ದಿನಾಂಕ: 16.3.2002 ರಂದು ಸದ್ರಿ ಬೈಕನ್ನು ಯಾರೋ ಐದು ಜನ ಜೀಪಿನಲ್ಲಿ ಬಂದು ತೆಗೆದುಕೊಂಡು ಹೋಗಿರುತ್ತಾರೆಂದು ಮತ್ತು ಅದನ್ನು ಅಬಕಾರಿ ಕಛೇರಿಗೆ ಕೊಂಡುಹೋಗುವುದಾಗಿ ತಿಳಿಸಿ ಹೋಗಿರುತ್ತಾರೆ ಎಂದು ಹೇಳಿಕೆ ಕೊಟ್ಟಿರುತ್ತಾರೆ. ಆದರೆ ಈ ಸಾಕ್ಷಿದಾರರು ವಾಹನ ಮಾಲೀಕರಿಗೆ ಸಹಾಯ ಮಾಡುವ ಉದ್ದೇಶದಿಂದ ಕಾಲ್ಪನಿಕ ಹೇಳಿಕೆಯನ್ನು ನೀಡಿರುತ್ತಾರೆಂದು ಅಭಿಪ್ರಾಯ ವ್ಯಕ್ತಪಡಿಸುತ್ತೇನೆ.

ಅಬಕಾರಿ ಅಧಿಕಾರಿಗಳು ಈ ಪ್ರಕರಣದಲ್ಲಿ ಸುಳ್ಳು ಪ್ರಕರಣವನ್ನು ಸೃಷ್ಟಿ ಮಾಡಲು ಯಾವುದೇ ಕಾರಣವಿರುವುದು ಸಾಕ್ಷಿ ಆಧಾರಗಳಿಂದ ಕಂಡುಬರುವುದಿಲ್ಲ. ಅದಲ್ಲದೆ ಅಭಿಯೋಜನೆ ಪರ ಪ್ರಾ.ಸಾ.1 ರಿಂದ 3ರ ವರೆಗಿನ ಹೇಳಿಕೆಗಳು ಮತ್ತು ಹಾಜರುಪಡಿಸಲಾದ ದಾಖಲೆಗಳು ಈ ಪ್ರಕರಣದ ಆರೋಪಣೆಗಳನ್ನು ನಿಸ್ಸಂದೇಹವಾಗಿ ಸಾಬೀತುಪಡಿಸುತ್ತವೆ. ಈ ಕಾರಣಗಳಿಂದ, ವಾಹನ ಮಾಲೀಕನು ತನಗೆ ತಿಳಿಯದೆ ವಾಹನವನ್ನು ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಗೆ ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತುಪಡಿಸಲು ವಿಫಲರಾಗಿರುತ್ತಾರೆ. ಈ ಕಾರಣದಿಂದ ಎರಡನೇ ವಿವಾದಾಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಈ ಎಲ್ಲಾ ಕಾರಣಗಳು ಮತ್ತು ಪುರಾವೆಗಳಿಂದ ಈ ಪ್ರಕರಣದಲ್ಲಿ ಜಪ್ತುಗೊಳಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತ ಎಂದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ:394:ಡಿಟಿಸಿಆರ್: 2001-02, ದಿನಾಂಕ: 4ನೇ ಸೆಪ್ಟೆಂಬರ್ 2003.**

ಗೋವಿಂದಪ್ಪ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ಆದ ನಾನು 1965 ಕರ್ನಾಟಕ ಅಬಕಾರಿ ಅಧಿನಿಯಮ ಕಲಂ 43 (ಎ)ರ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಗುಪ್ತ ವಾರ್ತಾದಳ, ಮಂಗಳೂರು ಇವರು ದಾಖಲೆ ಮಾಡಿದ ಮೊಕದ್ದಮೆ ಸಂಖ್ಯೆ: ಇಐಬಿ:ಅ.ಸ.ಇ. ಪ್ರಥಮ ಮಾಹಿತಿ ವರದಿ ಸಂಖ್ಯೆ: 25:2001-02, ದಿನಾಂಕ: 16.03.2002 ರಲ್ಲಿ ಜಪ್ತುಪಡಿಸಿರುವ ವಾಹನ ಮೋಟಾರು ಸೈಕಲ್ ಸಂಖ್ಯೆ: ಕೆಎ-19ಎಲ್-7501 (ಹೀರೋ ಹೊಂಡಾ) ನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 04.09.2003 ರಂದು ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಗೋವಿಂದಪ್ಪ**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ. ಜಿಲ್ಲೆ. ಮಂಗಳೂರು.

**ಅನುಬಂಧ - 1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ. :1 - ಶ್ರೀ ಕೃಷ್ಣ ನ್ಯಾಕ್, ಅಬಕಾರಿ ಉಪ ನಿರೀಕ್ಷಕರು, ಗುಪ್ತ ವಾರ್ತಾದಳ, ಮಂಗಳೂರು
ಪ್ರಾ.ಸಾ. :2 - ಶ್ರೀ ಸೋಮಶೇಖರ್ ಅಬಕಾರಿ ಉಪ ನಿರೀಕ್ಷಕರು, ಉಳ್ಳಾಲ ಉಪವಲಯ.
ಪ್ರಾ.ಸಾ. :3 - ಶ್ರೀ ಎಂ. ವಿ. ಶೇಟ್, ಅಬಕಾರಿ ರಕ್ಷಕರು, ಉಳ್ಳಾಲ ಉಪವಲಯ.

**ಅನುಬಂಧ - 2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು:**

ನಿಶಾನೆ ಪಿ-1 - ಅಬಕಾರಿ ಕಾಯ್ದೆ ಕಲಂ 43(ಎ) ರೀತ್ಯಾ ವಶಪಡಿಸಿಕೊಳ್ಳಲಾಗಿರುವ ಸ್ವತ್ತುಗಳ ಪಟ್ಟಿ.
ನಿಶಾನೆ ಪಿ-2 - ಪ್ರಥಮ ಮಾಹಿತಿ ವರದಿ ಪ್ರತಿ
ನಿಶಾನೆ ಪಿ-3 - ಸ್ಥಳ ಮಹಜರು ಪ್ರತಿ
ನಿಶಾನೆ ಪಿ-4 ರಾಸಾಯನಿಕ ತಜ್ಞರ ವರದಿ ಪ್ರತಿ

**ಅನುಬಂಧ - 3**

**ವಾಹನ ಮಾಲೀಕರ ಪರ ವಿಚಾರಣೆ ಮಾಡಿದ ಸಾಕ್ಷಿದಾರರು:**

ಡಿ.ಡಬ್ಲ್ಯೂ1: - ಅಶೋಕ್ ಪೆರಾವೊ, ವಾಹನ ಮಾಲೀಕರು
ಡಿಡಬ್ಲ್ಯೂ-2: - ಪ್ರವೀಣ್ ಮೊಂತೆರೊ

**ಅನುಬಂಧ - 4**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು:**

ಇಲ್ಲ

**ಗೋವಿಂದಪ್ಪ**
ಪಿ. ಆರ್.1086 ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ. ಜಿಲ್ಲೆ. ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂಬ್ರ: ಎಸ್‌ಡಿಕೆ:347:ಡಿಟಿಸಿಆರ್: 2001-2002 ದಿನಾಂಕ: 6ನೇ ಸೆಪ್ಟೆಂಬರ್ 2003**

**ಉಪಸ್ಥಿತರು: ಗೋವಿಂದಪ್ಪ**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು** ವಿರುದ್ಧ **ಆರೋಪಿಗಳು**
ಅಬಕಾರಿ ಉಪ ನಿರೀಕ್ಷಕರು, ಆರೋಪಿಗಳು ಪರಾರಿಯಾಗಿರುತ್ತಾರೆ.
ಮಂಗಳೂರು ಉಪ ವಿಭಾಗ,
ಮಂಗಳೂರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 3.2.2002 ರಂದು ಸಂಜೆ ಸುಮಾರು 6.35 ಗಂಟೆ ಸಮಯದಲ್ಲಿ ಫಿರ್ಯಾದುದಾರರು ಅಬಕಾರಿ ಉಪ ಅಧೀಕ್ಷಕರು, ಮಂಗಳೂರು ಉಪ ವಿಭಾಗದ ನೇತೃತ್ವದಲ್ಲಿ ಇಲಾಖೆ ಜೀಪಿನಲ್ಲಿ ತಮ್ಮ ಸಿಬ್ಬಂದಿ ಸಮೇತ ಮಂಗಳೂರು ನಗರದ ವ್ಯಾಪ್ತಿಯಲ್ಲಿ ಬರುವ ಕದ್ರಿ ಹಿಲ್ಸ್ ದೂರವಾಣಿ ಕೇಂದ್ರದ ಬಳಿ ರಾಷ್ಟ್ರೀಯ ಹೆದ್ದಾರಿ ಸಂ:17 ರಲ್ಲಿ ನಂತೂರಿನಿಂದ ಕೊಳೂರು ಕಡೆಗೆ ಒಂದು ಲಾರಿಯು ಬರುತ್ತಿರುವುದು ಕಾಣಿಸಿಕೊಂಡಿತು. ಅನುಮಾನದಿಂದ ಇಲಾಖೆಯವರು ಲಾರಿಯನ್ನು ನಿಲ್ಲಿಸಲು ಸೂಚನೆ ನೀಡಿದಾಗ ಸದರಿ ಲಾರಿಯ ಚಾಲಕನು ಇಲಾಖೆಯವರ ಜೀಪಿನಿಂದ ಸುಮಾರು 25 ಗಜ ದೂರದಲ್ಲಿ ತನ್ನ ಲಾರಿಯನ್ನು ನಿಲ್ಲಿಸಿ ಲಾರಿಯಿಂದ ಜಿಗಿದು ಪರಾರಿಯಾಗಿರುತ್ತಾರೆ.

ನಂತರ ಸದರಿ ಲಾರಿಯ ಚಾಲಕ ಹಾಗೂ ಸಹ ಚಾಲಕನನ್ನು ಹಿಡಿಯಲು ಪ್ರಯತ್ನಿಸಿದರೂ ಅದು ಫಲಕಾರಿಯಾಗಿರುವುದಿಲ್ಲ. ನಂತರ ಸದರಿ ಲಾರಿಯನ್ನು ಪರಿಶೀಲಿಸಿದಾಗ ಲಾರಿಯ ನೋಂದಣಿ ಸಂ: ಕೆಎ19-4575 ಆಗಿದ್ದು ಇದರಲ್ಲಿ ಮದ್ಯದ ಬಾಟಲುಗಳು ತುಂಬಿದ ರಟ್ಟಿನ ಪೆಟ್ಟಿಗೆಗಳು ಕಂಡುಬಂತು. ಈ ಬಗ್ಗೆ ಯಾವುದಾದರೂ ದಾಖಲೆ ಪತ್ರಗಳು ಇದೆಯೆಂದು ಲಾರಿಯ ಕ್ಯಾಬಿನ್‌ನನ್ನು ಶೋಧಿಸಲಾಗಿ ಯಾವುದೇ ದಾಖಲಾತಿಗಳು ದೊರೆತಿರುವುದಿಲ್ಲ. ನಂತರ ಈ ಬಗ್ಗೆ ಸಾಕ್ಷಿಗಾಗಿ ಆಸು ಪಾಸಿನಲ್ಲಿ ವಿಚಾರಿಸಲಾಗಿ ಯಾರು ಮುಂದೆ ಬಾರದ ಕಾರಣ ಇಲಾಖೆಯವರೇ ಸಾಕ್ಷಿಯಾಗಿ ಬರಮಾಡಿಕೊಂಡು ಸದರಿ ಲಾರಿಯಲ್ಲಿದ್ದ ಮದ್ಯದ ಬಾಟಲುಗಳನ್ನು ಪರಿಶೀಲಿಸಿದಾಗ ಅವುಗಳು ಈ ಕೆಳಗಿನಂತಿವೆ.

| ಮದ್ಯದ ಹೆಸರು | 750 ಎಂಎಲ್‌ನ | 375 ಎಂಎಲ್‌ನ (ಪೆಟ್ಟಿಗೆಗಳಲ್ಲಿ) | 180 ಎಂಎಲ್‌ನ | ಲೀಟರುಗಳು |
|---|---|---|---|---|
| ಗೋಲ್ಡನ್ ಸನ್ ವಿಸ್ಕಿ | - | - | 75 | 648.000 |
| ಡಾಲರ್ ವಿಸ್ಕಿ | - | - | 268 | 2315.520 |
| ಫೈವ್‌ಸ್ಟಾರ್ ವಿಸ್ಕಿ | 2 | 1 | 19 | 191.160 |
| ಡೆಮೊಕ್ರಟ್ ವಿಸ್ಕಿ | 4 | - | 3 | 61.920 |
| ಸಾವರೀನ್ ಬ್ರಾಂಡಿ | 7 | 1 | 7 | 132.480 |
| ಡಾಲರ್ ಬ್ರಾಂಡಿ | - | - | 3 | 25.920 |
| ಕೋಕೊಟೇಲ್ ಜಿನ್ | - | 1 | 2 | 26.280 |
| ಖೋಡೆ ನಂ:1 ವಿಸ್ಕಿ | 16 | 4 | 19 | 311.160 |
| ಹರ್ಕ್ಯೂಲರ್ಸ್ ತ್ರಿಬಲ್‌ಎಕ್ಸ್ ರಂ | - | 3 | 10 | 113.400 |
| ಹರ್ಕ್ಯೂಲರ್ಸ್ ವೈಟ್ ರಂ | 2 | - | 3 | 43.920 |
| ಒಟ್ಟು | 31 | 10 | 409 | 3902.760 |

ಸದರಿ ಮದ್ಯದಿಂದ ರಾಸಾಯನಿಕ ಪರೀಕ್ಷೆಗಾಗಿ ಮದ್ಯದ ಬಾಟಲುಗಳಿಂದ ತಲಾ ಒಂದೊಂದರಂತೆ ತಲಾ 20 ಸೀಸೆಗಳನ್ನು ಮಾದರಿಯಾಗಿ ತೆಗೆದುಕೊಂಡು ಸೀಸೆಗಳ ಮೇಲೆ ಬಟ್ಟೆ ದಾರದಿಂದ ಸುತ್ತಿ ಇಲಾಖಾ ಸೀಲಿನಿಂದ ಸೀಲು ಮಾಡಿ ಮಾದರಿ ಸೀಲನ್ನು ತಯಾರಿಸಿ ಗುರುತಿನ ಚೀಟಿಗಳನ್ನು ಬರೆದು ಮಾದರಿ ಸೀಸೆಗಳಿಗೆ ಅಂಟಿಸಿ ಮಹಜರನ್ನು ಸ್ಥಳದಲ್ಲಿಯೇ ಬರೆದು ಸೊತ್ತುಗಳನ್ನು ತಮ್ಮ ವಶಕ್ಕೆ ವಶಪಡಿಸಿಕೊಂಡಿರುತ್ತಾರೆ. ಇದು ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 10,11,14 ರ ರೀತ್ಯಾ ಉಲ್ಲಂಘನೆಯಾಗಿದ್ದು ಕಲಂ 32,38 (ಎ)ರಂತೆ ಶಿಕ್ಷಾರ್ಹವಾಗಿರುವ ಕಾರಣ ಮೊಕದ್ದಮೆ ಸಂ: 20/2001-02 ದಿನಾಂಕ: 3.2.2002 ರಂದು ಮೊಕದ್ದಮೆಯನ್ನು ದಾಖಲಿಸಿ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸೊತ್ತುಗಳನ್ನು ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು ಕದ್ರಿ ವಲಯರವರಿಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಕದ್ರಿ ವಲಯ ಇವರು ಪ್ರಕರಣದ ತನಿಖೆಯನ್ನು ಮುಂದುವರಿಸಿ ಪ್ರಕರಣದಲ್ಲಿ ಜಪ್ತುಗೊಳಿಸಲಾದ ಮದ್ಯದ ಮಾದರಿ ಸೀಸೆಗಳನ್ನು ವಿಶ್ಲೇಷಣೆಗಾಗಿ ರಾಸಾಯನಿಕ ತಜ್ಞರಿಗೆ ಒಳಪಡಿಸಿ ರಾಸಾಯನಿಕ ತಜ್ಞರಿಂದ ವಿಶ್ಲೇಷಣೆ ವರದಿಯನ್ನು ಪಡೆದಿರುತ್ತಾರೆ. ರಾಸಾಯನಿಕ ತಜ್ಞರ ವರದಿಯಂತೆ ಮಾದರಿಯು ಮದ್ಯವೆಂದು ಇದು ಮಾನವನ ಸೇವನೆಗೆ ಯೋಗ್ಯವಾಗಿದೆಯೆಂದು ಅಭಿಪ್ರಾಯದ ಮೇರೆಗೆ ಈ ಪ್ರಕರಣದಲ್ಲಿ ಜಪ್ತು ಪಡಿಸಿರುವ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಶಿಫಾರಸ್ಸಿನ ಮೇರೆಗೆ ಈ ಪ್ರಾಧಿಕಾರವು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮದ್ಯವನ್ನು ವಿಲೇವಾರಿ ಮಾಡಲು ಆದೇಶ ಸಂ: ಎಸ್‌ಡಿಕೆ: 347: ಡಿಟಿಸಿಆರ್:2001-02 ದಿನಾಂಕ: 21.3.2002 ರಂದು ಆದೇಶ ನೀಡಿರುತ್ತದೆ.

ಜಪ್ತುಪಡಿಸಲಾದ ವಾಹನದ ಮಾಲೀಕರ ಹೆಸರು ಮತ್ತು ವಿಳಾಸಗಳ ವಿವರಗಳನ್ನು ಪಡೆಯಲು ಈ ಪ್ರಾಧಿಕಾರವು ಸಾರಿಗೆ ಅಧಿಕಾರಿಗಳು ದ.ಕ. ಜಿಲ್ಲೆ, ಪುತ್ತೂರು, ಹಾಗೂ ಹಾಸನ ಜಿಲ್ಲೆ ಇವರಿಗೆ ಪತ್ರ ವ್ಯವಹಾರ ನಡೆಸಿದ್ದು ಸಾರಿಗೆ ಅಧಿಕಾರಿಗಳು ಹಾಸನ ಜಿಲ್ಲೆ ಇವರು ತಮ್ಮ ಪತ್ರ ಸಂ:ಪ್ರಾ.ಸಾ.ಅ.ಟಿ.ಆರ್.ಎಫ್.ಟಿ: 2003-04 ದಿನಾಂಕ: 13.8.2003 ರಂದು ವಾಹನದ "ಬಿ" ವಹಿಯನ್ನು ನೀಡಿರುತ್ತಾರೆ. ಸದರಿ "ಬಿ" ವಹಿಯಂತೆ ವಾಹನ ಮಾಲೀಕರು ಬಿ. ಎನ್. ಶಿವಕುಮಾರ್ ಬಿನ್ ನಂಜೇಗೌಡ, ಬುಸ್ತೇನಾ ಹಳ್ಳಿ ಬೂವನಹಳ್ಳಿ ಅಂಚೆ ಹಾಸನ ತಾಲ್ಲೂಕು ಹಾಸನ ಎಂದು ತಿಳಿಸಿರುತ್ತಾರೆ. ವಾಹನ ಮಾಲೀಕರಿಗೆ ಈ ಪ್ರಾಧಿಕಾರವು ದಿನಾಂಕ: 19.8.2003 ರಂದು ಕಾರಣ ಕೇಳಿ ನೋಟೀಸನ್ನು ಅಬಕಾರಿ ಕಾಯಿದೆ ಕಲಂ 43 "ಬಿ" ರ ಅಡಿಯಲ್ಲಿ ನೀಡಿರುತ್ತದೆ. ಆದರೆ ಸದರಿ ನೋಟೀಸು ಜಾರಿಯಾಗದೆ ಹಿಂದಕ್ಕೆ ಬಂದಿರುತ್ತದೆ. ಮತ್ತು ವಾಹನವನ್ನು ಕೋರಿ ಯಾವುದೇ ವ್ಯಕ್ತಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಪಡಿಸುವಾಗ ಅಪರಾಧಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿ ಒಂದು ತಿಂಗಳ ಅವಧಿಯಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದ್ರಿ ಸ್ವತ್ತುಗಳು ತಮ್ಮವೆಂದು, ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷಾಧಾರಗಳೊಂದಿಗೆ ಅರ್ಜಿಯನ್ನು ಸಲ್ಲಿಸದಿದ್ದಲ್ಲಿ ಸದ್ರಿ ಸ್ವತ್ತುಗಳು, ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43 ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸ್ವತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43 (ಸಿ)ರ ಅಡಿಯಲ್ಲಿ ಜಪ್ತುಪಡಿಸಿದ್ದ ಅಕ್ರಮ ಸಾರಾಯಿಯನ್ನು ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಸದರಿ ಪ್ರಕರಣವು ದಾಖಲಾಗಿ ಸುಮಾರು 1 ವರ್ಷ 7 ತಿಂಗಳು ಕಳೆದಿದ್ದರೂ, ಈವರೆಗೆ ಯಾವುದೇ ವ್ಯಕ್ತಿಯು ಈ ವಾಹನವು ತನ್ನದೆಂದು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಧಾರಗಳೊಂದಿಗೆ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಈ ಕಾರಣದಿಂದ ವಾಹನ ಮಾಲೀಕನು ತನ್ನ ತಿಳುವಳಿಕೆಯಿಂದಲೇ ಹಾಗೂ ಸ್ವತಹ ತಾನೇ ಈ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾನೆ ಎಂದು ಭಾವಿಸಬೇಕಾಗುತ್ತದೆ.

ಅಲ್ಲದೇ ದಿನಾಂಕ: 3.2.2002 ರಂದು ಅಬಕಾರಿ ಉಪ ನಿರೀಕ್ಷಕರು ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗುತ್ತಿದ್ದಾಗ ಪತ್ತೆ ಹಚ್ಚಿ ಸ್ಥಳ ಮಹಜರಿನೊಂದಿಗೆ ಅಕ್ರಮ ಮದ್ಯ ಹಾಗೂ ವಾಹನವನ್ನು ವಶಪಡಿಸಿಕೊಂಡಿರುತ್ತಾರೆ. ಮತ್ತು ಮೊಕದ್ದಮೆಯನ್ನು ದಾಖಲೆ ಪಡಿಸಿರುತ್ತಾರೆ. ದಾಖಲೆಗಳನ್ನು ಮಾನ್ಯ ನ್ಯಾಯಾಲಯಕ್ಕೂ ಹಾಗೂ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಜಪ್ತು ಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ ಅದು ಮದ್ಯವೆಂದು ದೃಢಪಟ್ಟಿರುತ್ತದೆ. ಈ ಮೇಲಿನ ಕಾರಣ ಪುರಾವೆ ಮತ್ತು ಲಭ್ಯವಿರುವ ಸಾಕ್ಷ್ಯಾಧಾರಗಳಿಂದ ಈ ವಾಹನವನ್ನು ಅಕ್ರಮ ಮದ್ಯ ಸಾಗಾಣಿಕೆಗೆ ಬಳಸಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಹಾಗೂ ಪ್ರಕರಣ ದಾಖಲಾಗಿ 1 ವರ್ಷ 7 ತಿಂಗಳುಗಳು ಕಳೆದಿದ್ದರೂ ಯಾವುದೇ ವ್ಯಕ್ತಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನವನ್ನು ತನ್ನದೆಂದು ಕೋರದೇ ಇರುವುದರಿಂದ ವಾಹನದಲ್ಲಿ ಅಕ್ರಮ ಮದ್ಯವು ಸಾಗಾಣಿಕೆಯಾಗಿರುವುದು ದೃಢಪಟ್ಟಿರುತ್ತದೆ. ಅಲ್ಲದೇ ವಾಹನವನ್ನು ತೆರೆದ ಜಾಗದಲ್ಲಿ ನಿಲ್ಲಿಸಿದ್ದು. ಅದು ಬಿಸಿಲು ಮಳೆ ಮುಂತಾದ ಹವಾಮಾನ ವೈಪರೀತ್ಯದಿಂದ ದಿನೇ ದಿನೇ ತನ್ನ ಗುಣಮಟ್ಟವನ್ನು ಕಳೆದುಕೊಂಡು ಅದರ ಮೌಲ್ಯವು ಕಡಿಮೆಯಾಗುವ ಸಾಧ್ಯತೆಯಿರುವುದರಿಂದ ಸರ್ಕಾರದ ಆದಾಯದ ಹಿತ ದೃಷ್ಟಿಯಿಂದ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸೂಕ್ತವೆಂದು ಈ ಪ್ರಾಧಿಕಾರವು ತೀರ್ಮಾನಿಸಿ ಈ ಆದೇಶ.

**ಆದೇಶ**

ಗೋವಿಂದಪ್ಪ, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43 (ಎ)ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43(ಬಿ) ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43 (ಸಿ) ರನ್ವಯ ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉಪ ವಿಭಾಗ, ಮಂಗಳೂರುರವರ ಮೊಕದ್ದಮೆ ಸಂಖ್ಯೆ:20/2001-02 ದಿನಾಂಕ:-03.2.2002 ರಲ್ಲಿ ವಶಪಡಿಸಿಕೊಂಡಿರುವ ಲಾರಿ ಸಂ: ಕೆಎ19-4575ನ್ನು (ಚಾಸೀಸ್‌ನಂ: 344052396713. ಇಂಜಿನ್‌ನಂ:692-ಡಿ02-410424) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 6.9.2003 ರಂದು ಶೀಘ್ರ ಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಗೋವಿಂದಪ್ಪ**

ಪಿ. ಆರ್.1087

ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ. ಜಿಲ್ಲೆ, ಮಂಗಳೂರು.

## PROCEEDINGS OF THE REGISTRAR OF CO-OPERATIVE SOCIETIES SHIMOGA SUB DIVISION, SHIMOGA

**Sub :** Confirmation of Sale of immovable property pertaining to the Judgement debtor Sri. Siddiqulla Khan S/o Amanulla Khan, Echavadi Village, Shimoga Taluk and Dist., under execution No. 507/02.03 and O.S.No. 423/02-03 in the file of Assistant Registrar of Co-Operative Societies, Shimoga issue of orders. Reg.

**Ref :** Report of Sale Officer/Recovery Officer PCA and RD Bank, Shimoga Vide his letter dated 9.08.2003.

**Preamble:**

The Secretary Primary Co-Operative Agriculture and Rural Development Bank Ltd., Shimoga has filed a dispute under section 70 of Karnataka Co-Operative Societies Act 1959 against the Member Sri. Siddiqulla Khan S/o Amanulla Khan and Smt. Ajmathunnisa W/o Siddiqulla Khan, Echavadi, Shimoga Taluk, Shimoga Dist. Before the Deputy Registrar of Co-Operative Societies, Shimoga vide dispute No. 423/2002-03 and obtained an award against the said member for recovery of the debt due by the above said member for recovery of the debt to the above said bank of dated: 21.02.2003 Further the degree holder bank has applied for an execution of award on 26.04.2003. The execution proceedings under execution on petition No 507/2002-03 on the file of this office has been taken against the Judgement debtor. As per the K.C.S. Act and Rules, the Sale Officer Primary Co-Operative Agriculture and Rural Development Bank Ltd., Shimoga has brought the Mortgaged property of the Judgement debtor Sri. Siddiqualla Khan S/o Amanulla Khan and Smt. Ajmathunnisa W/o Siddiqulla Khan, Echavadi, Shimoga Taluk, Shimoga Dist. Into Sale for recovery of the decretal dues of the bank in order to realise the dues. The sale in public auction was conducted on dated 23.06.2003, after observing proceedural formalities ennumerated under Rule 38 of K.C.S. Rule 1960 in public auction the said scheduled mortgaged property was sold to the highest bidder Smt. Alimunnisa W/o Khahi Bashir Ahmed, Mandli, Shimoga Taluk and Dist. to the extent of Rs. 2,75,000/- (Rupees Two Lakh Seventy Five thousand only) There were no objection from anybody either before the sale or after the sale of 30 days. From the above sale conducted on 23.06.2003 in orders and to made it as obsulate and hence the following order.

**Order**

**No:ARIS:24:ABN:SXN: 03-04:881 dated: 9th September 2003**

In excercise of the powers conferred under Rule 38 (6) (a) of Karnataka Co-Operative Societies Act 1959 and Rule 1960 read with Government Notification No. CMW:69:CLM:2001 dated: 21.11.2001. The Sale of immovable property datailed in the schedule here into under the execution proceedings of

execution petition was sold on public auction conducted by the Sale Officer/Supervisor, Primary Co-Operative Agriculture and Rural Development Bank Ltd., Shimoga on 23.06.2003 is hereby confirmed in favour of the auction purchaser Smt. Alimunnisa W/o Khaji Bashir Ahmed, Mandli, Shimoga Taluk and Dist. for an amount of Rs. 2,75,000/- (Rupees Two Lakh Seventy Five thousand only).

The Sale Certificate as required under Sub Rule (7) of Rule 38 of K.C.S. Rules 1960 is issued separately to the purchaser.

**SCHEDULE OF PROPERTY**

| Name of the Khatedar | Village/Taluk | Property | Sy.No. |
|---|---|---|---|
| Siddiqulla Khan | Gajanur Village | Rain Fed | 11/P |
| S/o Amanulla Khan | Shimoga Taluk | Land | |
| Echavadi, | | extent | |
| Shimoga Taluk | | 2.34 acres | |
| | | 3.00 acres | 11/P |

Given under my hand and seal on this the day 9th September 2003

Assistant Registrar of Co-Operative
PR-1088 Societies, Shimoga Sub Division, Shimoga.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ,**
**ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂಬ್ರ: ಎಸ್‌ಡಿಕೆ:282:ಡಿಟಿಸಿಆರ್: 2001-2002 ದಿನಾಂಕ: 4ನೇ ಸೆಪ್ಟೆಂಬರ್ 2003**

**ಉಪಸ್ಥಿತರು: ಗೋವಿಂದಪ್ಪ**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು** **ವಿರುದ್ಧ** **ಆರೋಪಿಗಳು**
ಶ್ರೀ ಎ. ಕುಶಾಲಪ್ಪ ಗೌಡ ಪತ್ತೆಯಾಗಿರುವುದಿಲ್ಲ.
ಅಬಕಾರಿ ಉಪ ನಿರೀಕ್ಷಕರು,
ಮಂಗಳೂರು ಉಪ ವಿಭಾಗ, ಮಂಗಳೂರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 24.12.2001 ರಂದು ಸಾಯಂಕಾಲ 4-45 ಗಂಟೆ ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉಪ ವಿಭಾಗ, ಮಂಗಳೂರು ಇವರು ಮಂಗಳೂರು ನಗರದ ಮಂಗಳೂರು-ಕಾರ್ಕಳ ರಸ್ತೆಯಲ್ಲಿ ರಸ್ತೆಗಾವಲು ನಡೆಸಿಕೊಂಡು ಗುರುಪುರದ ಕಡೆ ಹೋಗುತ್ತಿರುವಾಗ ಮಂಗಳೂರು ನಗರದ ಕುಲಶೇಖರ ಎಂಬಲ್ಲಿ ಇಂಡಿಯನ್ ಆಯಿಲ್ ಕಾರ್ಪೊರೇಶನ್‌ನ ಪೆಟ್ರೋಲ್ ಬಂಕ್ ಬಳಿ ಒಂದು ಲಾರಿಯು (ಸಂ:ಎಂಪಿ-10ಎ-3559) ನಿಂತಿದ್ದು ಅನುಮಾನದ ಮೇಲೆ ಇಲಾಖೆ ಜೀಪನ್ನು ಲಾರಿಯ ಕಡೆಗೆ ತಿರುಗಿಸಲು ಲಾರಿಯಲ್ಲಿದ್ದ ಇಬ್ಬರು ಆಸಾಮಿಗಳು ಲಾರಿಯಿಂದ ಇಳಿದು ಓಡಿ ಹೋದುದರಿಂದ ಲಾರಿಯನ್ನು ಪರಿಶೀಲಿಸಿ ಲಾರಿಗೆ ಹೊದಿಸಿದ್ದ ಟಾರ್ಪಾಲನ್ನು ತೆಗೆದು ನೋಡಲಾಗಿ ಲಾರಿಯಲ್ಲಿ ಮದ್ಯ ತುಂಬಿದ ಬಾಟ್ಲಿಗಳ ರಟ್ಟಿನ ಪೆಟ್ಟಿಗೆಗಳು ಕಂಡು ಬಂದವು. ಸ್ಥಳದಲ್ಲಿ ಯಾವುದೇ ಪಂಚರು ದೊರಕದ ಕಾರಣ ಇಲಾಖೆಯವರನ್ನೇ ಪಂಚರನ್ನಾಗಿಸಿಕೊಂಡು ಲಾರಿಯನ್ನು ತಪಾಸಣೆ ಮಾಡಲಾಗಿ ಲಾರಿಯಲ್ಲಿ ಈ ಕೆಳಗೆ ನಮೂದಿಸಿರುವ ಮದ್ಯದ ಪಟ್ಟಿಗೆಗಳು ಕಂಡು ಬಂದಿರುತ್ತದೆ. ಅವುಗಳು ಫಿಲಿಪ್ಸ್ ವಿಸ್ಕಿ, ಖೋಡೆ ಡಿಸ್ಟಿಲರೀಸ್, ಬೆಂಗಳೂರು ಎಂಬ ಲೇಬಲ್‌ಗಳಿದ್ದು ಅವುಗಳ ಪ್ರಮಾಣ ಈ ಕೆಳಗಿನಂತಿರುತ್ತದೆ.

| | | | |
|---|---|---|---|
| 1) | 12ರ 750 ಎಂ.ಎಲ್ | - | 140 ಪೆಟ್ಟಿಗೆಗಳು |
| 2) | 34 ರ 375 ಎಂ.ಎಲ್ | - | 100 ಪೆಟ್ಟಿಗೆಗಳು |
| 3) | 48 ರ 180 ಎಂ.ಎಲ್ | - | 335 ಪೆಟ್ಟಿಗೆಗಳು |
| | ಒಟ್ಟು | - | 575 ಪೆಟ್ಟಿಗೆಗಳು. |

ಲಾರಿಯಲ್ಲಿ ಒಟ್ಟು 575 ಪೆಟ್ಟಿಗೆಗಳು (5054-400ಲೀ). ಇದ್ದುದು ಕಂಡು ಬಂತು ಲಾರಿಯ ನೋಂದಣಿ ಸಂ: ಎಂಪಿ-10ಎ-3559 ಇದ್ದು ಅದರ ಇಂಜಿನ್ ನಂ: ಕ್ಯೂಎಸ್‌ಇ: 266504 ಇದ್ದು ಚಾಸೀಸ್ ಸಂ: ಕ್ಯೂಎಕ್ಸ್‌ಇ: 378471 ಇರುತ್ತದೆ. ಲಾರಿಯಲ್ಲಿದ್ದ ಮದ್ಯದ ಸಾಗಾಣಿಕೆಗೆ ಸಂಬಂಧಿಸಿದಂತೆ ಲಾರಿಯಲ್ಲಿ ಯಾವುದೇ ದಾಖಲೆ ಅಥವಾ ರಹದಾರಿ ಪತ್ರಗಳು ದೊರೆತಿಲ್ಲವಾದ್ದರಿಂದ ಇದು ಅಕ್ರಮ ಮದ್ಯವೆಂದು ಪರಿಗಣಿಸಿ ರಾಸಾಯನಿಕ ಪರೀಕ್ಷೆಗಾಗಿ 750 ಎಂ.ಎಲ್., 375 ಎಂ.ಎಲ್ ಮತ್ತು 180 ಎಂ.ಎಲ್ ಸಾಮರ್ಥ್ಯದ 3 ಬಾಟ್ಲಿಗಳನ್ನು ಮಾದರಿಗಾಗಿ ತೆಗೆದು ಮಾದರಿ ಸೀಸೆಗಳಿಗೆ ಬಟ್ಟೆದಾರ ಕಟ್ಟಿ ಇಲಾಖಾ ಸೀಲಿನಿಂದ ಸೀಲು ಮಾಡಿ ಅವುಗಳಿಗೆ ಗುರುತಿನ ಚೀಟಿಗಳನ್ನು ಅಂಟಿಸಿ ಸ್ಥಳದಲ್ಲೇ ಮಹಜರನ್ನು ಸಾಯಂಕಾಲ 4-45 ರಿಂದ 7-00 ಗಂಟೆವರೆಗೆ ತಯಾರಿಸಿ ಪತ್ತೆಯಾದ ವಸ್ತುಗಳನ್ನು ಸರ್ಕಾರಕ್ಕೆ ವಶಪಡಿಸಿಕೊಂಡು ಕಛೇರಿಗೆ ಬಂದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 10,11,13,32,34 ಮತ್ತು 38ಎ ರ ರೀತ್ಯಾ ಗುನ್ನೆ ಸಂ: ಎಂಎಸ್‌ಡಿ:ಎಸ್‌ಐಇ: ಎಫ್‌ಐಆರ್:16:2001-02 ರಮೂಲಕ ಮೊಕದ್ದಮೆಯನ್ನು ದಾಖಲು ಮಾಡಿ ಮಹಜರು ಮತ್ತು ಪ್ರಥಮ ಮಾಹಿತಿ ವರದಿಯನ್ನು ನ್ಯಾಯಾಲಯಕ್ಕೂ ಮತ್ತು ಪ್ರಾಧಿಕಾರಕ್ಕೂ ನೀಡಿರುತ್ತಾರೆ. ಮತ್ತು ಜಪ್ತಿಪಡಿಸಲಾದ ಸೊತ್ತುಗಳನ್ನು ತಮ್ಮಲ್ಲಿ ಇಟ್ಟುಕೊಳ್ಳಲು ಪ್ರಾಧಿಕಾರದಿಂದ ಅನುಮತಿ ಪಡೆದಿರುತ್ತಾರೆ. ಮೊಕದ್ದಮೆಯನ್ನು ಮುಂದಿನ ತನಿಖೆಗೆ ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ ಇವರಿಗೆ ಹಸ್ತಾಂತರ ಮಾಡಿರುತ್ತಾರೆ.

ದಿನಾಂಕ: 29.07.2002 ರಂದು ಅರ್ಜಿದಾರರು ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ಒಂದು ಅರ್ಜಿಯನ್ನು ಸಲ್ಲಿಸಿದ ವಾಹನದ ಮಧ್ಯಂತರ ಬಿಡುಗಡೆಗೆ ಕೋರಿರುತ್ತಾರೆ, ದಿನಾಂಕ: 19.9.2002 ರಂದು ವಾಹನ ಮಾಲೀಕರಿಗೆ ಕಾರಣ ಕೇಳಿ ನೋಟೀಸನ್ನು ನೀಡಿದ್ದು ಅದು ಸ್ವೀಕೃತಗೊಂಡಿದ್ದು ಕಾರಣ ಕೇಳಿದ ನೋಟೀಸಿಗೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ಅರ್ಜಿದಾರರ ಕೋರಿಕೆಯಂತೆ ವಾಹನವನ್ನು ಮಧ್ಯಂತರ ಬಿಡುಗಡೆಗೆ 1,50,000/- ರೂ.ಗಳ ಬ್ಯಾಂಕ್ ಗ್ಯಾರಂಟಿ ಮತ್ತು ಇನ್ನಿತರ ಷರತ್ತುಗಳೊಂದಿಗೆ ವಾಹನದ ಮಧ್ಯಂತರ ಬಿಡುಗಡೆಗೆ ಈ ಪ್ರಾಧಿಕಾರವು ತನ್ನ ಆದೇಶ ಸಂ: ಎಸ್‌ಡಿಕೆ: 282:ಡಿಟಿಸಿಆರ್:2001-02 ದಿನಾಂಕ: 26.12.01 ರಂದು ಆದೇಶ ನೀಡಿದ್ದು ಅರ್ಜಿದಾರರು ವಾಹನವನ್ನು ಮಧ್ಯಂತರ ವಶಕ್ಕೆ ಪಡೆದುಕೊಂಡಿರುವುದಿಲ್ಲ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಅಭಿಯೋಜನೆ ಪರ 3 ಸಾಕ್ಷಿಗಳ ವಿಚಾರಣೆಯನ್ನು ಪ್ರತಿರಕ್ಷಾ ಪರ ಒಂದು ಸಾಕ್ಷಿಯನ್ನು ವಿಚಾರಣೆಗೆ ಒಳಪಡಿಸಿ ಅವರುಗಳ ಹೇಳಿಕೆಯನ್ನು ಪಡೆಯಲಾಗಿದೆ. ಈ ಪ್ರಕರಣದಲ್ಲಿ ಸರ್ಕಾರದ ಪರ ಹಾಗೂ ಅರ್ಜಿದಾರರ ಪರವಾಗಿ ಸಲ್ಲಿಸಲಾಗಿರುವ ಸಾಕ್ಷಿ ಆಧಾರದ ಮೇಲೆ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತವೆ.

1. ದಿನಾಂಕ: 24.12.2001 ರಂದು ವಾಹನ ಲಾರಿ ಸಂ: ಎಂಪಿ-10ಎ-3559 ರಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆ ಮಾಡಲಾಗಿತ್ತೇ?
2. ಅರ್ಜಿದಾರರು ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂಬುದನ್ನು ಮತ್ತು ತನಗೆ ತಿಳಿಯದೆ ಅಕ್ರಮ ಮದ್ಯ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತು ಪಡಿಸಿದ್ದಾರೆಯೇ?
3. ಜಪ್ತಿ ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯದ ಆಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದು, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಇಲ್ಲವೆಂದು, ಮೂರನೇ ಅಂಶವನ್ನು ಕೊನೆಯ ಆದೇಶದಂತೆ.

**ಪ್ರಾ.ಸಾ.1:**

ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉಪ ವಿಭಾಗ, ಮಂಗಳೂರು ಇವರು ಈ ಪ್ರಕರಣದ ಫಿರ್ಯಾದುದಾರರಾಗಿದ್ದು ದಿನಾಂಕ: 26.12.2002 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡಿರುತ್ತಾರೆ. ದಿನಾಂಕ: 24.12.2001 ರಂದು ಸಾಯಂಕಾಲ 4-45ರ ಸಮಯ ತಮ್ಮ ಸಿಬ್ಬಂದಿಯೊಂದಿಗೆ ರಸ್ತೆಗಾವಲು ನಡೆಸುತ್ತಾ ಮಂಗಳೂರು ಕಡೆಯಿಂದ ವಾಹನಗಳ ತಪಾಸಣೆ ಮಾಡುತ್ತಾ ಗುರುಪುರ ಕಡೆ ಹೋಗುತ್ತಿರಲು ಕುಲಶೇಖರದಲ್ಲಿ ಇಂಡಿಯನ್ ಆಯಿಲ್ ಪೆಟ್ರೋಲ್ ಬಂಕ್ ಬಳಿ ಲಾರಿ ಸಂಖ್ಯೆ: ಎಂಪಿ:10:ಎ-3559 ಲಾರಿಯು ನಿಂತಿದ್ದು ಅದರ ಬದಿ ಹೋಗಲು ಅದರಲ್ಲಿ ಕುಳಿತಿದ್ದ ಎರಡು ಜನ ಓಡಿ ಹೋದರು. ಅವರನ್ನು ಹಿಡಿಯಲು ಪ್ರಯತ್ನಿಸಿದ್ದು ಅವರು ಸಿಗಲಿಲ್ಲ. ನಂತರ ಲಾರಿಯ ಟರ್ಪಾಲನ್ನು ತೆಗೆದು ನೋಡಲಾಗಿ ಅದರಲ್ಲಿ ಫಿಲಿಪ್ಸ್ ವಿಸ್ಕಿ ಎಂದು ನಮೂದಿಸಿರುವ ರಟ್ಟಿನ ಪೆಟ್ಟಿಗೆಗಳಿರುವುದು ಕಂಡುಬಂತು. ಸಾಕ್ಷಿಯಾಗಿ ಸ್ಥಳೀಯರನ್ನು ಸಹಕರಿಸಲು ಕೋರಿದಾಗ ಅವರುಗಳು ಬಾರದೆ ಇದ್ದುದರಿಂದ ಇಲಾಖೆಯವರನ್ನೇ ಸಾಕ್ಷಿಯಾಗಿ ತೆಗೆದುಕೊಂಡು ಲಾರಿಯನ್ನು ಪರಿಶೀಲಿಸಲು ಲಾರಿ ನಂ:ಎಂಪಿ:10ಎ-3559 ಇದ್ದು ಇಂಜಿನ್ ಸಂಖ್ಯೆ: ಕ್ಯೂಎಸ್‌ಇ-263504 ಮತ್ತು ಚಾಸೀಸ್ ಸಂಖ್ಯೆ: ಕ್ಯೂಎಕ್ಸ್‌ಇ-378471 ಆಗಿದ್ದು ಮದ್ಯದ ಬಾಟ್ಲಿಗಳನ್ನು ಲೆಕ್ಕ ಮಾಡಲಾಗಿ 1) 140 ಪೆಟ್ಟಿಗೆಗಳಲ್ಲಿ 750 ಎಂ.ಎಲ್‌ನ ತಲಾ 12 ಬಾಟ್ಲಿಗಳಿದ್ದು 2) 100 ಪೆಟ್ಟಿಗೆಗಳಲ್ಲಿ ತಲಾ 375 ಎಂ.ಎಲ್‌ನ 24 ಬಾಟ್ಲಿಗಳಿದ್ದು ಮತ್ತು 3) 335 ಪೆಟ್ಟಿಗೆಗಳಲ್ಲಿ ತಲಾ 180 ಎಂ.ಎಲ್‌ನ 48 ಬಾಟ್ಲಿಗಳಿರುವುದು ಕಂಡುಬಂತು. ಈ ಸಂಬಂಧ ವಾಹನದಲ್ಲಿ ಯಾವುದೇ ರಹದಾರಿ: ಯಾ: ದಾಖಲೆಗಳು ಲಭ್ಯವಾಗಿಲ್ಲದ್ದರಿಂದ ದೊರೆತ ಮದ್ಯದಿಂದ 750 ಎಂ.ಎಲ್. 375 ಎಂ.ಎಲ್ ಮತ್ತು 180 ಎಂ.ಎಲ್ ಹೀಗೆ 3 ಬಾಟ್ಲಿಗಳನ್ನು ಮಾದರಿಯಾಗಿ ತೆಗೆದು ಬಾಟ್ಲಿಗಳಿಗೆ ಬಟ್ಟೆದಾರ ಸುತ್ತಿ ಇಲಾಖಾ ಸೀಲಿನಿಂದ ಸೀಲ್ ಮಾಡಿರುವುದಾಗಿ ಬಾಟ್ಲಿಗಳಿಗೆ ಗುರುತಿನ ಚೀಟಿ ಅಂಟಿಸಿ ಸ್ಥಳದಲ್ಲೇ ಮಹಜರು ತಯಾರಿಸಿರುವುದಾಗಿ ತಿಳಿಸಿರುತ್ತಾರೆ. ವಶಪಡಿಸಿಕೊಂಡ ವಾಹನ ಮತ್ತು ಮದ್ಯದ ಪೆಟ್ಟಿಗೆಗಳನ್ನು ಕಛೇರಿಗೆ ತಂದು ಮೊಕದ್ದಮೆ ಸಂಖ್ಯೆ: ಎಂಎಸ್‌ಡಿ:ಎಸ್‌ಐಇ:ಎಫ್‌ಐಆರ್: 16: 2001-02, ದಿನಾಂಕ: 24.12.2001ರ ಮೂಲಕ ಮೊಕದ್ದಮೆಯನ್ನು ದಾಖಲುಪಡಿಸಿರುವುದಾಗಿ ತಿಳಿಸಿರುತ್ತಾರೆ. ತಯಾರಿಸಿರುವ ಪ್ರಥಮ ಮಾಹಿತಿ ವರದಿಯನ್ನು ನಿಶಾಣೆ ಪಿ-1 ಎಂದು ಮಹಜರಿನ ಕಾರ್ಬನ್ ಪ್ರತಿಯನ್ನು ನಿಶಾನೆ ಪಿ-2 ಎಂದು ಸೊತ್ತುಗಳನ್ನು ವಶಪಡಿಸಿಕೊಂಡ ಬಗ್ಗೆ ವರದಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿದ್ದು ಅದು ನಿಶಾನೆ ಪಿ-3 ಎಂದು ಗುರುತಿಸಲಾಗಿದೆ. ಮುಂದಿನ ತನಿಖೆಗಾಗಿ ಪ್ರಕರಣದ ದಾಖಲಾತಿಗಳನ್ನು ಸೊತ್ತುಗಳೊಂದಿಗೆ ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ ಇವರಿಗೆ ಹಸ್ತಾಂತರಿಸಿರುವುದಾಗಿ ತಿಳಿಸಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಕಛೇರಿಯಿಂದ 4-15ಕ್ಕೆ ಹೊರಟಿದ್ದೆವು. ಈ ವಾಹನವನ್ನು ತಪಾಸಣೆ ಮಾಡುವ ಮುನ್ನ ಎರಡು ಅಥವಾ ಮೂರು ವಾಹನಗಳನ್ನು ತಪಾಸಣೆ ಮಾಡಿರಬಹುದು. ನಾವು ವಾಹನದಿಂದ 20 ಅಡಿ ದೂರವಿದ್ದಾಗ ಲಾರಿಯಿಂದ ಎರಡು ಜನ ಓಡಿ ಹೋದದ್ದನ್ನು ನೋಡಿದೆವು. ಅವರನ್ನು ಬೆನ್ನಟ್ಟಿದ್ದೆವು. ಸಾಕ್ಷಿಯಾಗಿ ಬರಲು ಕೆಲವರನ್ನು ಕೇಳಿದೆವು ಎಂದು ತಿಳಿಸಿರುತ್ತಾರೆ. ಮುಂದುವರಿದು, ಮಹಜರನ್ನು ಕಛೇರಿಯಲ್ಲಿ ತಯಾರಿಸಿದೆವು. ಸದ್ರಿ ಲಾರಿಯಲ್ಲಿ ಯಾವುದೇ ಮದ್ಯವು ಇರಲಿಲ್ಲವೆಂದರೆ ಸರಿಯಲ್ಲ. ವಾಹನದ ವಿರುದ್ಧ ಸುಳ್ಳು ಪ್ರಕರಣವನ್ನು ದಾಖಲಿಸಿದ್ದೇವೆಂದರೆ ಸರಿಯಲ್ಲವೆಂದು ತಿಳಿಸಿರುತ್ತಾರೆ. ಪಾಟೀ ಸವಾಲಿನಿಂದ ಮುಖ್ಯ ವಿಚಾರಣಾ ಹೇಳಿಕೆಗೆ ಯಾವುದೇ ವಿರುದ್ಧ ಅಂಶಗಳು ಕಂಡು ಬರುವುದಿಲ್ಲ.

**ಪ್ರಾ.ಸಾ. 2:**

ಶ್ರೀ ಹರೀಶ್ ಕುಮಾರ್, ಅಬಕಾರಿ ರಕ್ಷಕ ಇವರು ತಮ್ಮ ಹೇಳಿಕೆಯನ್ನು ದಿನಾಂಕ: 26.12.2002 ರಂದು ಪ್ರಾಧಿಕಾರದ ಮುಂದೆ ನೀಡಿರುತ್ತಾರೆ. ಅವರು ಈ ಪ್ರಕರಣದಲ್ಲಿ ತೆಗೆದ ಮಾದರಿ ಸೀಸೆಗಳನ್ನು ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ ಇವರಿಂದ ಪಡೆದು ರಾಸಾಯನಿಕ ಪರೀಕ್ಷೆಗಾಗಿ ಮಂಗಳೂರಿನ ರಾಸಾಯನಿಕ ತಜ್ಞರ ಕಛೇರಿಗೆ ತಲುಪಿಸಿರುತ್ತೇನೆ ಮತ್ತು ವಿಶ್ಲೇಷಣಾ ವರದಿಯನ್ನು ಮತ್ತು ವಿಶ್ಲೇಷಿಸಿದ ಸೀಸೆಗಳನ್ನು ತಂದು ವಲಯ ಕಛೇರಿಗೆ ತಲುಪಿಸಿದ್ದಾಗಿ ಸಾಕ್ಷಿ ನುಡಿದಿರುತ್ತಾರೆ.

**ಪ್ರಾ.ಸಾ.3:**

ಅಬಕಾರಿ ಉಪ ನಿರೀಕ್ಷಕರು, ಕುಲಶೇಖರ ಉಪ ವಲಯ ಇವರು ಈ ಪ್ರಕರಣದ ತನಿಖಾಧಿಕಾರಿಯಾಗಿದ್ದು ಇವರು ಉಪ ನಿರೀಕ್ಷಕರು, ಮಂಗಳೂರು ಉಪ ವಿಭಾಗ ಇವರಿಂದ ದಿನಾಂಕ: 27.12.01 ರಂದು ಪ್ರಕರಣದ ದಾಖಲೆ ಪತ್ರಗಳನ್ನು ಸಂಬಂಧಪಟ್ಟ ಸೊತ್ತುಗಳೊಂದಿಗೆ ಸ್ವೀಕರಿಸಿ ಅದೇ ದಿನ ಮಾದರಿ ಸೀಸೆಯನ್ನು ಅಬಕಾರಿ ರಕ್ಷಕ ಹರೀಶ್ ಕುಮಾರ್ ಇವರ ಮೂಲಕ ರಾಸಾಯನಿಕ ಪರೀಕ್ಷೆಗೆ ಕಳುಹಿಸಿ ದಿನಾಂಕ: 28.12.2002 ರಂದು ವಿಶ್ಲೇಷಣಾ ವರದಿಯನ್ನು ಹಾಗೂ ಮಾದರಿ ಸೀಸೆಗಳನ್ನು ಪಡೆದಿರುತ್ತೇನೆಂದು ಹೇಳಿಕೆ ನೀಡಿರುತ್ತಾರೆ. ಮದ್ಯದ ತೀಕ್ಷ್ಣತೆ 25 ಯ.ಪಿ. ಇದ್ದು ಮಾನವನ ಸೇವನೆಗೆ ಯೋಗ್ಯವಾಗಿದೆ ಎಂದು ದೃಢೀಕರಣ ವರದಿ ಬಂದಿರುತ್ತದೆಂದು

ತಿಳಿಸಿರುತ್ತಾರೆ. ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ವಾಹನಕ್ಕೆ ಸಂಬಂಧಪಟ್ಟ ಆರ್.ಸಿ. ಮಾಲೀಕರನ್ನು ವೈಯುಕ್ತಿಕವಾಗಿ ವಿಚಾರಣೆ ಮಾಡಿಲ್ಲವೆಂದು ತಿಳಿಸಿರುತ್ತಾರೆ.

ಈ ಪ್ರಕರಣದ ಅಭಿಯೋಜನೆಯ ಪರ ಸಾಕ್ಷಿದಾರರಾದ ಪ್ರಾ.ಸಾ.1, ಪ್ರಾ.ಸಾ.2 ಮತ್ತು ಪ್ರಾ.ಸಾ. 3 ಇವರ ಸಾಕ್ಷಿಯಿಂದ ಮತ್ತು ಗುರ್ತಿಸಲಾದ ಮತ್ತು ಹಾಜರುಪಡಿಸಿರುವ ದಾಖಲೆಗಳಿಂದ ಜಪ್ತಿಪಡಿಸಲಾಗಿರುವ ವಾಹನದಲ್ಲಿ ಅಕ್ರಮವಾಗಿ 5054-400 ಲೀಟರ್ ಮದ್ಯವನ್ನು ಸಾಗಾಟ ಮಾಡಿರುವುದು ಸ್ಪಷ್ಟವಾಗಿ ಸಾಬೀತಾಗಿರುತ್ತದೆ. ಆದುದರಿಂದ, ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಿದೆ.

ಪ್ರಕರಣದ ಎರಡನೇ ಅಂಶವಾಗಿರುವ ಜಪ್ತಿಪಡಿಸಿರುವ ವಾಹನ ಮಾಲೀಕರು ತನ್ನ ತಿಳುವಳಿಕೆಗೆ ಬಾರದೆ ಮದ್ಯದ ಅಕ್ರಮ ಸಾಗಾಣಿಕೆ ನಡೆದಿರುತ್ತದೆ ಎಂಬುದನ್ನು ಸಾಬೀತುಪಡಿಸಬೇಕಾಗಿದ್ದು ಅರ್ಜಿದಾರರ ಪರ ಒಂದು ಪ್ರತಿರಕ್ಷಾ ಸಾಕ್ಷಿಯನ್ನು ಈ ಪ್ರಾಧಿಕಾರವು ವಿಚಾರಣೆ ಮಾಡಿರುತ್ತದೆ.

**ಡಿಡಬ್ಲ್ಯೂ-1:**

ಶ್ರೀ ಪವನ್ ಭಗವಾನ್ ಬನ್ಸಾಲ್ ಬಿನ್: ಭಗವಾನ್ ರಾಮೇಶ್ವರ ಬನ್ಸಾಲ್ ಇವರು ದಿನಾಂಕ: 20.6.03 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ಇವರು ಮದ್ಯಪ್ರದೇಶ ನಿವಾಳಿ ಎಂಬಲ್ಲಿಯ ವಾಸಿಯಾಗಿದ್ದು ಈ ಪ್ರಕರಣದಲ್ಲಿ ಜಪ್ತಿಪಡಿಸಿರುವ ವಾಹನದ ನೋಂದಾಯಿತ ಮಾಲೀಕರ ಮಗನೆಂದು ತನ್ನ ತಂದೆಯವರ ಅನಾರೋಗ್ಯದ ದೃಷ್ಟಿಯಿಂದ ಈ ಪ್ರಕರಣದಲ್ಲಿ ಸಾಕ್ಷಿ ನುಡಿಯಲು ನನ್ನ ತಂದೆಯವರು ತನಗೆ ಅಧಿಕಾರ ಪತ್ರವನ್ನು ನೀಡಿರುವುದಾಗಿ ತಿಳಿಸಿರುತ್ತಾರೆ. ವಾಹನದ ವ್ಯವಹಾರಗಳನ್ನು ತಾನೇ ನೋಡಿಕೊಳ್ಳುತ್ತಿದ್ದು ವಾಹನವು ದಿನಾಂಕ: 18.06.2001 ರ ವರೆಗೆ ನಮ್ಮ ಸುಪರ್ದಿನಲ್ಲಿದ್ದು ಅದನ್ನು ದಿನಾಂಕ: 18.06.2001 ರಂದು ನಾಸಿಕದ ವಾಸಿ ಶಿವದತ್ತಸ್ವಾಮಿ ಎಂಬವರಿಗೆ ಮಾರಾಟ ಮಾಡಿರುವುದಾಗಿ ತಿಳಿಸಿರುತ್ತಾರೆ. ದಿನಾಂಕ: 18.06.2001 ರಂದು ವಾಹನವನ್ನು ಹಸ್ತಾಂತರಿಸುವಲ್ಲಿ ಒಂದು ಮಾರಾಟ ಕರಾರನ್ನು ಮಾಡಿಕೊಂಡಿರುವುದಾಗಿ ತಿಳಿಸಿರುತ್ತಾರೆ. ಈ ಕರಾರಿನಂತೆ ವಾಹನಕ್ಕೆ ಸಂಬಂಧಪಟ್ಟ ಎಲ್ಲಾ ಜವಾಬ್ದಾರಿಯು ಆತನದ್ದೇ ಎಂದು ಒಪ್ಪಿಕೊಂಡಿರುವನೆಂದು ತಿಳಿಸಿರುತ್ತಾನೆ. 2002ನೇ ಜೂನ್ ತಿಂಗಳಲ್ಲಿ ಕರೆಂಗಾವೊ ಸಾರಿಗೆ ಅಧಿಕಾರಿಗಳ ಕಛೇರಿಯಿಂದ ಕರ್ನಾಟಕದಲ್ಲಿ ಅಬಕಾರಿ ಅಧಿಕಾರಿಗಳು ವಾಹನವನ್ನು ಜಪ್ತಿಗೊಳಿಸಿರುವುದು ನಮ್ಮ ಗಮನಕ್ಕೆ ಬಂದಿರುತ್ತದೆ. ತಕ್ಷೀರಿನ ವಿಚಾರ ನನಗಾಗಲೀ ನನ್ನ ತಂದೆಯವರಾಗಲೀ ತಿಳಿದಿರುವುದಿಲ್ಲ. ಅಮಾನತುಗೊಳಿಸಿರುವ ವಾಹನವನ್ನು ಯಾವುದೇ ಕಾನೂನುಬಾಹಿರ ಕೃತ್ಯಗಳಿಗೆ ಉಪಯೋಗವಾಗದಂತೆ ನಮ್ಮ ತಂದೆಯವರು ಮತ್ತು ನಾನು ಎಲ್ಲಾ ತರಹದ ಮುಂಜಾಗ್ರತೆಯನ್ನು ವಹಿಸಿಕೊಂಡಿರುತ್ತೇವೆ. ದಿನಾಂಕ: 18.06.01 ರ ಬಳಿಕ ವಾಹನದ ನಿಯಂತ್ರಣ ನನಗಾಗಲೀ ನನ್ನ ತಂದೆಯವರಾಗಲೀ ಇರದಿದ್ದ ಸಂದರ್ಭ ನಾನು ಈ ಬಗ್ಗೆ ಪೊಲೀಸರಿಗೆ ದೂರು ನೀಡಿ ಎಲ್ಲಾ ಮುನ್ನೆಚ್ಚರಿಕೆಗಳನ್ನು ವಹಿಸಿಕೊಂಡಿರುತ್ತೇನೆ. ಆದುದರಿಂದ ಈ ವಾಹನದ ಮುಂದಿನ ನಡವಳಿಯನ್ನು ಕೈಬಿಟ್ಟು ವಾಹನವನ್ನು ತಮ್ಮ ವಶಕ್ಕೆ ನೀಡಲು ಕೋರಿರುತ್ತಾರೆ.

ಡಿಡಬ್ಲ್ಯೂ-1 ಇವರು ಪ್ರಾಧಿಕಾರದ ಮುಂದೆ ನೀಡಿದ ಹೇಳಿಕೆಯಲ್ಲಿ ತನ್ನ ತಂದೆಯವರು ದಿನಾಂಕ: 18.06.2001 ರಂದು ಸದ್ರಿ ವಾಹನವನ್ನು ಬೇರೆ ವ್ಯಕ್ತಿ ಶಿವದತ್ತಸ್ವಾಮಿ ಎಂಬುವವರಿಗೆ ಮಾರಾಟ ಮಾಡಿದ್ದು ವಾಹನದ ಸ್ವಾಧೀನತ್ವವನ್ನು ಕೂಡಾ ಸದ್ರಿ ಶಿವದತ್ತ ಸ್ವಾಮಿಗೆ ಹಸ್ತಾಂತರಿಸಲಾಗಿದೆ. ಎಂಬುದಾಗಿ ನುಡಿದಿರುತ್ತಾರೆ. ಆದರೆ, ವಾಹನದ ಆರ್.ಸಿ. ಪುಸ್ತಕದಲ್ಲಿ ತನ್ನ ತಂದೆ ಹೆಸರು ಮುಂದುವರಿದಿರುತ್ತದೆ. ಇದಲ್ಲದೆ ಮಾರಾಟದ ಹಣ ಬಾಕಿ ಇರುವುದಾಗಿ ಕೂಡಾ ತಿಳಿಸಿರುತ್ತಾರೆ. ಆದರೆ, ಈ ಪ್ರಕರಣದಲ್ಲಿ ದಿನಾಂಕ: 24.12.2001 ರಂದು ವಾಹನವು ಅಕ್ರಮ ಮದ್ಯ ಸಾಗಾಣಿಕೆಯಲ್ಲಿ ತೊಡಗಿದ್ದು ಆದಿನದಂದು ಅಬಕಾರಿ ಅಧಿಕಾರಿಗಳು ವಾಹನವನ್ನು ವಶಪಡಿಸಿಕೊಂಡಿರುತ್ತಾರೆ. ಅಂದರೆ, ವಾಹನವನ್ನು ವಶಪಡಿಸಿಕೊಂಡ ದಿನದಂದು ಭಗವಾನ್ ರಾಮೇಶ್ವರ ಬನ್ಸಾಲ್ ಇವರು ವಾಹನದ ಮಾಲೀಕರಾಗಿರುತ್ತಾರೆಯೇ ಎಂಬ ಅಂಶವನ್ನು ಪರಿಶೀಲನೆ ಮಾಡುವುದು ಅಗತ್ಯವಾಗಿರುತ್ತದೆ.

ಈ ಬಗ್ಗೆ 1939ನೇ ಮೋಟಾರು ವಾಹನ ಕಾಯ್ದೆಯನ್ನು ಚೌದರಿಯವರ ಮೋಟಾರು ವೆಹಿಕಲ್ಸ್ ಆ್ಯಕ್ಟ್‌ನ 7ನೇ ಮುದ್ರಣದಲ್ಲಿ 1980ರಲ್ಲಿ ಪ್ರಕಟಣೆ ಮಾಡಿ ಪುಟ ಸಂಖ್ಯೆ: 90 ರಲ್ಲಿ ಈ ಕೆಳಗಿನಂತೆ ವ್ಯಾಖ್ಯಾನಿಸಿ ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ. (ಈ ಪುಸ್ತಕವು ಲಾ ಬುಕ್ ಕಂ., ಅಲಹಾಬಾದ್ ಇವರಿಗೆ ಸೇರಿದ್ದಾಗಿರುತ್ತದೆ.) ಈ ಅಭಿಪ್ರಾಯವನ್ನು ಈ ಕೆಳಗಿನ ಪ್ರಕರಣಗಳೊಂದಿಗೆ ಉಲ್ಲೇಖಿಸಿರುತ್ತಾರೆ.

Kishan Pandurang Kedge V. Baldev Singh Gian Singh, 1977 Mah. L. J. 656, 659-60 & Kathreena V.R.T.O., 1978 Ker. L.T. 434, 435-36. 4. Ownership of the motor vehicle is changed from the date of the transfer, and not from the date of recording thereof in the certificate of registration.-Under Sec.31, registration can be transferred only after the ownership of the vehicle has been transferred. It is incorrect to say that the sale of a motor vehicle is not complete unless the registration has been transferred. There is no provision in the Motor Vehicles Act which deals with the transfer of ownership of the vehicle, like any movable property is governed by the sale of Goods Act. The provision in Sec. 31 of the Motor Vehicles Act in only to the effect that after the change of ownership of the vehicle has taken place, corresponding change should be recorded in the certificate of registration, that is, in place of the previous owner the name of the new owner should be substituted. The trnasfer of ownership, thus, takes place from the date of sale, and not from the date on which the name of the transferee is recorded in the certificate of registration.

ಈ ಮೇಲೆ ತಿಳಿಸಲಾಗಿರುವ ಅಭಿಪ್ರಾಯದಂತೆ ಯಾವುದೇ ವಾಹನವನ್ನು ಮಾರಾಟ ಮಾಡಿದ ದಿನದಿಂದಲೇ ವಾಹನದ ಮಾಲೀಕತ್ವವು ವಾಹನವನ್ನು ಖರೀದಿಸಿದವರಿಗೆ ವರ್ಗಾವಣೆ ಆಗುತ್ತದೆ. ಮಾರಾಟ ಮಾಡುವವರ ಹೆಸರು ಆರ್. ಸಿ. ಪುಸ್ತಕದಲ್ಲಿ ಬದಲಾವಣೆ ಮಾಡದಿದ್ದರೂ ಸಹ ಮಾಲೀಕತ್ವದ ವರ್ಗಾವಣೆ ಮಾರಾಟ ಮಾಡಿದ ದಿನದಂದೇ ಆಗುತ್ತದೆ. ಪ್ರಸ್ತುತ ಪ್ರಕರಣದಲ್ಲಿ ಈ ಮೇಲೆ ಹೇಳಿದ ಕಾನೂನಿನ ನಿಯಮದನ್ವಯ ದಿನಾಂಕ: 18.6.2001 ರಿಂದ ವಾಹನದ ಮಾಲೀಕತ್ವವು ಭಗವಾನ್ ರಾಮೇಶ್ವರ್ ಬನ್ಸಾಲ್, ಇವರಿಂದ ಬೇರೆಯವರಿಗೆ ಅಂದರೆ ವಾಹನವನ್ನು ಖರೀದಿಸಿದ ಶಿವದತ್ತ ಸ್ವಾಮಿಯವರಿಗೆ ವರ್ಗಾವಣೆ ಆಗಿದೆ. ಅಂದರೆ ದಿನಾಂಕ: 24.12.01 ರಂದು ಶ್ರೀ ಭಗವಾನ್ ರಾಮೇಶ್ವರ್ ಬನ್ಸಾಲ್‌ರವರು ವಾಹನ ಸಂ: ಎಂಪಿ-10ಎ3559 ಇದರ ಮಾಲೀಕರಾಗಿರುವುದಿಲ್ಲ. ಈ ಕಾರಣದಿಂದ ಸದ್ರಿಯವರು ಈ ವಾಹನವನ್ನು ತನ್ನ ಪರವಾಗಿ ಬಿಡುಗಡೆಗೊಳಿಸುವಂತೆ ಕೋರಲು ಯಾವುದೇ ಹಕ್ಕನ್ನು ಹೊಂದಿರುವುದಿಲ್ಲ. ಅಲ್ಲದೆ ಶ್ರೀ ಭಗವಾನ್ ರಾಮೇಶ್ವರ್ ಬನ್ಸಾಲ್ ಇವರು ತನಗೆ ತಿಳಿಯದಂತೆ ವಾಹನವು ಅಕ್ರಮ ಮದ್ಯ ಸಾಗಣೆಗೆ ಉಪಯೋಗಿಸಲ್ಪಟ್ಟಿದೆ

ಎಂಬುದನ್ನು ಸಾಬೀತುಗೊಳಿಸಿಲ್ಲ ಎಂಬ ಅಭಿಪ್ರಾಯವನ್ನು ಪ್ರಕರಣದ ಸಾಕ್ಷ್ಯಾಧಾರಗಳನ್ನು ಪರಿಶೀಲಿಸಿ ವ್ಯಕ್ತಪಡಿಸಬಹುದಾಗಿದೆ. ಅಲ್ಲದೆ, ಈ ಮೇಲಿನ ಅರ್ಜಿದಾರರನ್ನು ಹೊರತುಪಡಿಸಿ ಬೇರೆ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ವಾಹನದ ಬಿಡುಗಡೆ ಕೋರಿ ಯಾವುದೇ ಅರ್ಜಿ ಸಲ್ಲಿಸಿರುವುದಿಲ್ಲ. ಆದುದರಿಂದ ಈ ಮೇಲಿನ ಕಾರಣಗಳಿಂದಾಗಿ ಎರಡನೇ ಅಂಶವನ್ನು ನಕರಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಎಲ್ಲಾ ಕಾರಣಗಳು ಹಾಗೂ ಪುರಾವೆಗಳಿಂದ ಈ ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ: 282: ಡಿಟಿಸಿಆರ್: 2001-02, ದಿನಾಂಕ: 4ನೇ ಸೆಪ್ಟೆಂಬರ್ 2003**

ಗೋವಿಂದಪ್ಪ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ಆದ ನಾನು 1965 ಕರ್ನಾಟಕ ಅಬಕಾರಿ ಅಧಿನಿಯಮ ಕಲಂ 43(ಎ)ರ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉಪ ವಿಭಾಗ, ಮಂಗಳೂರು ದಾಖಲೆ ಮಾಡಿದ ಮೊಕದ್ದಮೆ ಸಂಖ್ಯೆ: ಎಂಎಸ್‌ಡಿ:ಎಸ್‌ಐಇ:ಎಫ್‌ಐಆರ್: 16: 2001-02, ದಿನಾಂಕ: 26.12.2002 ರಲ್ಲಿ ಜಪ್ತುಪಡಿಸಿರುವ ವಾಹನ ಲಾರಿ ಸಂಖ್ಯೆ: ಎಂಪಿ-10ಎ-3559ನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 4.9.2003 ರಂದು ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಗೋವಿಂದಪ್ಪ**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ. ಜಿಲ್ಲೆ. ಮಂಗಳೂರು.

**ಅನುಬಂಧ - 1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ. :1 - ಶ್ರೀ ಎ. ಕುಶಾಲಪ್ಪಗೌಡ ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉಪ ವಿಭಾಗ, ಮಂಗಳೂರು.
ಪ್ರಾ.ಸಾ. :2 - ಶ್ರೀ ಹರೀಶ್ ಕುಮಾರ್ ಅಬಕಾರಿ ರಕ್ಷಕ, ಕುಲಶೇಖರ ಉಪ ವಲಯ, ಮಂಗಳೂರು
ಪ್ರಾ.ಸಾ. :3 - ಶ್ರೀ ಸೂರ್ಯವಂಶಿ, ಅಬಕಾರಿ ಉಪ ನಿರೀಕ್ಷಕರು ಕದ್ರಿ ಉಪವಲಯ.

**ಅನುಬಂಧ - 2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1 - ಪ್ರಥಮ ಮಾಹಿತಿ ವರದಿ
ನಿಶಾನೆ ಪಿ-2 - ಮಹಜರಿನ ಕಾರ್ಬನ್ ಪ್ರತಿ
ನಿಶಾನೆ ಪಿ-3 - ಸ್ವತ್ತುಗಳನ್ನು ವಶಪಡಿಸಿಕೊಂಡು ಪ್ರಾಧಿಕಾರಕ್ಕೆ ಸಲ್ಲಿಸಿದ ವರದಿ
ನಿಶಾನೆ ಪಿ-4 - ರಾಸಾಯನಿಕ ತಜ್ಞರ ವರದಿ ಪ್ರತಿ

**ಅನುಬಂಧ - 3**

**ವಾಹನ ಮಾಲೀಕರ ಪರ ವಿಚಾರಣೆ ಮಾಡಿದ ಸಾಕ್ಷಿದಾರರು:**

ಡಿ.ಡಬ್ಲ್ಯೂ-1: - ಪವನ್ ಭಗವಾನ್ ಬನ್‌ಸಾಲ್ ಬಿನ್: ಭಗವಾನ್ ರಾಮೇಶ್ವರ್ ಬನ್ಸಾಲ್

**ಅನುಬಂಧ - 4**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು:**

ಡಿ-1 - ಆರ್.ಸಿ.ಯ ಜೆರಾಕ್ಸ್ ಪ್ರತಿ
ಡಿ-2 - ಕಮ್ಯೂನಿಟಿ ಹೆಲ್ತ್ ಸೆಂಟರ್‌ನಿಂದ ನೀಡಲಾದ ವೈದ್ಯಕೀಯ ಪ್ರಮಾಣ ಪತ್ರ
ಡಿ-3 - ತನ್ನ ತಂದೆಯವರು ನಯಿ ದುನಿಯ ವಾರ್ತಾಪತ್ರಿಕೆಯ ವರದಿಗಾರರು ಎಂಬ ತೋರಿಸುವ ಗುರುತಿನ ಪತ್ರ.
ಡಿ-4 - ತನ್ನ ತಂದೆಯವರಿಗೆ ಚುನಾವಣಾ ಆಯೋಗದಿಂದ ನೀಡಲಾದ ಗುರುತಿನ ಪತ್ರ
ಡಿ-5 - ತಮ್ಮ ಮನೆಯ ಪಡಿತರ ಚೀಟಿ
ಡಿ-6 - ತನ್ನ ತಂದೆಯವರಿಗೆ ಕೃಷಿ ಭೂಮಿ ಇದೆಯೆಂದು ತೋರಿಸುವ ಭೂ ಅಧಿಕಾರ ಪತ್ರ
ಡಿ-7 - ಶಿವದತ್ತ ಸ್ವಾಮಿಗೆ ವಾಹನವನ್ನು ಮಾರಾಟ ಮಾಡಿದಾಗ ಮಾಡಲಾದ ಮಾರಾಟ ಕರಾರಿನ ಮೂಲಪ್ರತಿ
ಡಿ-8 - ದಿನಾಂಕ: 07.11.2001 ರಂದು ಪೋಲೀಸ್ ನಿರೀಕ್ಷಕರವರಿಗೆ ನೀಡಿದ ದೂರಿನ ಸ್ವೀಕೃತಿ ಪತ್ರ
ಡಿ-8(ಎ) - ಶಹದಾ ಪೊಲೀಸ್ ಠಾಣೆಯ ಮುಖ್ಯ ಪೇದೆ ಎಚ್.ಸಿ. 221 ಎಂಬುವರು ಸಹಿ ಮಾಡಿದ ಹಾಗೂ ಠಾಣೆಯ ಮೊಹರು.
ಡಿ-9 - ದಿನಾಂಕ: 18.6.2001 ರಂದು ಮಾಡಲಾದ ಮಾರಾಟ ಕರಾರು ಹಿಂದಿ ಭಾಷೆಯಲ್ಲಿ ಇದ್ದು ಇದನ್ನು ಇಂಗ್ಲೀಷ್ ಭಾಷೆಗೆ ತರ್ಜುಮೆ ಮಾಡಲಾದ ಪ್ರತಿ.
ಡಿ-10 - ದಿನಾಂಕ:7.11.2001 ರಂದು ಶಹದಾ ಪೊಲೀಸ್ ಠಾಣೆಗೆ ನೀಡಲಾದ ದೂರು ಹಿಂದಿ ಭಾಷೆಯಲ್ಲಿದ್ದು ಇದನ್ನು ಇಂಗ್ಲೀಷ್ ಭಾಷೆಗೆ ತರ್ಜುಮೆ ಮಾಡಲಾದ ಪ್ರತಿ.
ಡಿ-11 - ತನ್ನ ತಂದೆಯವರು ಸದರಿ ಪ್ರಕರಣದಲ್ಲಿ ಸಾಕ್ಷಿ ನುಡಿಯಲು ನೀಡಿದ ಅಧಿಕಾರ ಪತ್ರದ ಪ್ರತಿ.
ಡಿ-12 - ತನ್ನ ತಂದೆಯವರು ಆದಾಯ ತೆರಿಗೆ ಪಾವತಿದಾರರಾಗಿದ್ದು ಆದಾಯ ತೆರಿಗೆ ಎಸೆಸ್‌ಮೆಂಟ್ ಪತ್ರ.

**ಗೋವಿಂದಪ್ಪ**
ಪಿ. ಆರ್.1089
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ. ಜಿಲ್ಲೆ, ಮಂಗಳೂರು.

## ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ
## ಸರ್ಕಾರಿ ಕೇಂದ್ರ ಪುಸ್ತಕ ಮಳಿಗೆ, ಬೆಂಗಳೂರು-560 001
## ಪ್ರಕಟಣೆ
### ಸಂಖ್ಯೆ: ಸಪುಮ:131:2003-04 ದಿನಾಂಕ: 22ನೇ ಸೆಪ್ಟೆಂಬರ್ 2003

ಈ ಮೂಲಕ ಸಾರ್ವಜನಿಕರ: ಸಂಘ ಸಂಸ್ಥೆಗಳ: ರಾಜ್ಯ ಸರ್ಕಾರದ ವಿವಿಧ ಇಲಾಖೆಗಳ ಗಮನಕ್ಕೆ ತರುವುದೇನೆಂದರೆ, ಸರ್ಕಾರಿ ಕೇಂದ್ರ ಪುಸ್ತಕ ಮಳಿಗೆ, ಬೆಂಗಳೂರು-1 (ಎ.ಜಿ.ಆಫೀಸು ಎದುರು) ಇಲ್ಲಿ ಈ ಕೆಳಕಂಡ ಕರ್ನಾಟಕ ರಾಜ್ಯ ಸರ್ಕಾರದ ವಿವಿಧ ಕನ್ನಡ ಪ್ರಕಟಣೆಗಳು ಮಾರಾಟಕ್ಕೆ ಲಭ್ಯವಿದ್ದು ಇದನ್ನು ಕಛೇರಿ ವೇಳೆಯಲ್ಲಿ ನಗದು ಪಾವತಿಸಿ ಖರೀದಿಸಬಹುದಾಗಿದೆ, ಅಥವಾ ಸಹಾಯಕ ನಿರ್ದೇಶಕರು, ಸರ್ಕಾರಿ ಕೇಂದ್ರ ಪುಸ್ತಕ ಮಳಿಗೆ, ಬೆಂಗಳೂರು ಇವರಿಗೆ ಪತ್ರ ವ್ಯವಹಾರ ಮಾಡಿ ಮಾಹಿತಿ ಪಡೆದು ಖರೀದಿಸಬಹುದಾಗಿದೆ.

| ಕ್ರಮ ಸಂಖ್ಯೆ | ಪ್ರಕಟಣೆಗಳ ಹೆಸರು | ದರ ರೂ. |
|---|---|---|
| 1) | ಕರ್ನಾಟಕ ರಾಜ್ಯ ಗೆಜೆಟಿಯರ್ ದಶವಾರ್ಷಿಕ ಪುರವಣಿ | 181-00 |
| 2) | ಜಿಲ್ಲಾ ಗೆಜೆಟಿಯರ್, ಧಾರವಾಡ | 175-00 |
| 3) | ಜಿಲ್ಲಾ ಗೆಜೆಟಿಯರ್, ಕೊಡಗು | 100-00 |
| 4) | ಜಿಲ್ಲಾ ಗೆಜೆಟಿಯರ್, ಗುಲ್ಬರ್ಗ | 200-00 |
| 5) | ಕರ್ನಾಟಕ ಕೈಪಿಡಿ | 116-00 |
| 6) | ಚಿನ್ನಪ್ಪರೆಡ್ಡಿ ಆಯೋಗ ವರದಿ ಭಾಗ-1 | 65-00 |
| 7) | ಚಿನ್ನಪ್ಪ ರೆಡ್ಡಿ ಆಯೋಗ ವರದಿ ಭಾಗ-2 | 65-00 |
| 8) | ಕನ್ನಡ ರತ್ನಕೋಶ | 5-00 |
| 9) | ಕರ್ನಾಟಕ ಆರ್ಥಿಕ ಸಂಹಿತೆ ಭಾಗ-2 | 5-00 |
| 10) | ಕರ್ನಾಟಕ ಸರ್ಕಾರಿ ನೌಕರರ ಸೇವಾ ಪರಿಷ್ಕೃತ ವೇತನ ನಿಯಮ-1994 | 5-00 |
| 11) | ಕರ್ನಾಟಕ ಸಿವಿಲ್ ಸೇವಾ ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು | 15-00 |
| 12) | ಸರ್ಕಾರಿ ರಹಸ್ಯ ಅಧಿನಿಯಮ | 2-00 |
| 13) | ಸಿವಿಲ್ ಸೇವಾ ಕಾರ್ಯನಿರ್ವಹಣಾ ವರದಿ | 4-00 |
| 14) | ಪದೀಯ ವೇತನ ಸಮಿತಿ ಮಧ್ಯಂತರ ಶಿಫಾರಸ್ಸುಗಳ ಕಾರ್ಯನಿರತ ಆದೇಶಗಳು | 8-00 |
| 15) | ಬೋಸ್ಟಲ್ ಶಾಲೆಗಳ ಅಧಿನಿಯಮ | 6-00 |
| 16) | ಸಾರ್ವಜನಿಕ ಗ್ರಂಥಾಲಯ ಅಧಿನಿಯಮ | 10-00 |
| 17) | ಕೃಷಿಯೇತರ ಸಾಲಗಳ ಅಧಿನಿಯಮ | 1-00 |
| 18) | ಕರ್ನಾಟಕ ಪೌರ ಸಭೆಗಳ ಅಧಿನಿಯಮ | 10-0 |
| 19) | ಕರ್ನಾಟಕ ಪೌರ ನಿಗಮಗಳ ಅಧಿನಿಯಮ | 14-00 |
| 20) | ಕರ್ನಾಟಕ ಗ್ರಾಮ ಹುದ್ದೆಗಳ ರದ್ದಾಯಿತಿ ಅಧಿನಿಯಮ 1961 | 4-00 |
| 21) | ಅಧ್ಯಾಪಕರ ಮಾರ್ಗದರ್ಶಿ ಸೂಚಿ | 3-00 |
| 22) | ಮಲೆನಾಡು ಪ್ರದೇಶ ಅಭಿವೃದ್ಧಿ ಮಂಡಳಿ | 9-00 |
| 23) | ಕರ್ನಾಟಕ ಪ್ಲಾಟುಗಳ ಒಡೆತನ ಅಧಿನಿಯಮ | 11-00 |
| 24) | ಕಾರ್ಖಾನೆ ಮತ್ತು ಬಾಯ್ಲರ್‌ಗಳ ಅಧಿನಿಯಮ | 7-00 |
| 25) | ಕರ್ನಾಟಕ ಸ್ಥಳೀಯ ಪ್ರಾಧಿಕಾರಗಳ ಪಕ್ಷಾಂತರ ನಿಷೇಧ ಅಧಿನಿಯಮ | 8-00 |
| 26) | ಕರ್ನಾಟಕ ಸ್ಟಾಂಪು ಅಧಿನಿಯಮ | 17-00 |
| 27) | ಕರ್ನಾಟಕ ಹಿಡುವಳಿ ತುಂಡೀಕರಣ ಅಧಿನಿಯಮ | 1-00 |
| 28) | ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ಅಧಿನಿಯಮ | 5-00 |
| 29) | ಕರ್ನಾಟಕ ಗೋವಧೆ ಪ್ರತಿಬಂಧಕ ಮತ್ತು ಜಾನುವಾರು ಅಧಿನಿಯಮ | 3-00 |
| 30) | ಕರ್ನಾಟಕ ಸ್ಥಳೀಯ ಮಾರಾಟಕ್ಕಾಗಿ ಬರುವ ಸರಕುಗಳ ಮೇಲಣ ತೆರಿಗೆ | 2-00 |
| 31) | ಕರ್ನಾಟಕ ಭಿಕ್ಷಾಟನೆ ನಿಷೇಧ ಅಧಿನಿಯಮ | 2-00 |
| 32) | ಕರ್ನಾಟಕ ಭೋಗ ವಸ್ತುಗಳ ಮೇಲಣ ತೆರಿಗೆ ಅಧಿನಿಯಮ | 3-00 |
| 33) | ವಕ್ಫ್ ಅಧಿನಿಯಮ | 3-00 |
| 34) | ಕರ್ನಾಟಕ ಮನರಂಜನೆ ತೆರಿಗೆ ಅಧಿನಿಯಮ | 7-00 |
| 35) | ಕರ್ನಾಟಕ ಸಾರ್ವಜನಿಕ ಹಣ ಬಾಕಿ ವಸೂಲಿ | 1-00 |
| 36) | ಕರ್ನಾಟಕ ಜೂಜು ತೆರಿಗೆ ಅಧಿನಿಯಮ | 2-00 |

| ಕ್ರಮ ಸಂಖ್ಯೆ | ಪ್ರಕಟಣೆಗಳ ಹೆಸರು | ದರ ರೂ. |
|---|---|---|
| 37) | ಕೆಲವು ಇನಾಮುಗಳ ರದ್ದತಿ ಅಧಿನಿಯಮ | 2-00 |
| 38) | ಕರ್ನಾಟಕ ಅಗ್ನಿಶಾಮಕ ದಳ ಅಧಿನಿಯಮ | 1-00 |
| 39) | ಕೊಳಚೆ ಪ್ರದೇಶಗಳ ನಿರ್ಮೂಲನಾ ಮಂಡಳಿ ಅಧಿನಿಯಮ | 3-00 |
| 40) | ಕರ್ನಾಟಕ ಮಕ್ಕಳ ಅಧಿನಿಯಮ | 3-00 |
| 41) | ಅಂಗಡಿ ಮತ್ತು ವಾಣಿಜ್ಯ ಕಾರ್ಯ ಸಂಸ್ಥೆಗಳು | 5-00 |
| 42) | ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ | 5-00 |
| 43) | ಕರ್ನಾಟಕ ಮಾರಾಟ ತೆರಿಗೆ ಅಧಿನಿಯಮ | 105-00 |
| 44) | ಪ್ರಾಚೀನ ಸ್ಮಾರಕ ಅವಶೇಷಗಳ ಅಧಿನಿಯಮ | 6-00 |
| 45) | ಪ್ರಾಥಮಿಕ ಶಾಲೆಗಳ ಸಹಾಯ ಧನ | 7-00 |
| 46) | ನ್ಯಾಯಾಲಯ ಫೀಜು, ದಾವೆಗಳ ಮೌಲ್ಯ ನಿಗದಿ ಅಧಿನಿಯಮ | 1-00 |
| 47) | ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984 | 18-00 |
| 48) | ಕಾನೂನು ಸೇವಾ ಪ್ರಾಧಿಕಾರ | 6-00 |
| 49) | ಸಿವಿಲ್ ನ್ಯಾಯಾಲಯ ಅಧಿನಿಯಮ | 2-00 |
| 50) | ಸರ್ಕಾರಿ ನೌಕರರ ಸೇವಾ ಪುಸ್ತಕ | 25-00 |
| 51) | ಶಾಲಾ ಮಕ್ಕಳ ಹಾಜರಾತಿ ಪುಸ್ತಕ | 22-00 |
| 52) | ಕ್ರೋಢೀಕೃತ ಅಂಕಪಟ್ಟಿ (ಪ್ಯಾಡ್ ಒಂದಕ್ಕೆ) | 84-00 |
| 53) | ವರ್ಗಾವಣೆ ಪ್ರಮಾಣ ಪತ್ರ (100ಕ್ಕೆ) | 44-00 |
| 54) | ಶಾಲಾ ಹಣ ಸ್ವೀಕೃತಿ ರಶೀದಿ ಪುಸ್ತಕ | 15-00 |
| 55) | ಶಾಲಾ ಪ್ರವೇಶ ಅರ್ಜಿ (100 ಕ್ಕೆ) | 40-00 |
| 56) | ನಗದು ಪುಸ್ತಕ | 84-00 |
| 57) | ಬಟವಾಡೆ ಪುಸ್ತಕ | 53-00 |
| 58) | ಅನುದಾನ ಬಿಲ್ಲು (ಜಿ.ಪಂ) | 21-00 |
| 59) | ಪತ್ರಾಂಕಿತರಲ್ಲದ ಅಧಿಕಾರಿಗಳ ಪ್ರಯಾಣ ಭತ್ಯೆ ಬಿಲ್ಲು ಫಾರಂ (100ಕ್ಕೆ) | 78-00 |
| 60) | ಜಿಲ್ಲಾ ಪಂಚಾಯತಿ ಸಂಕ್ಷಿಪ್ತ ಸಾದಿಲ್ವಾರು ಬಿಲ್ಲು | 40-00 |
| 61) | ಜಿಲ್ಲಾ ಪಂಚಾಯತಿ ಸಿ.ಟಿ.ಎಸ್.9 | 21-00 |
| 62) | ಜಿಲ್ಲಾ ಪಂಚಾಯತಿ ಪತ್ರಾಂಕಿತವಲ್ಲದ ಅಧಿಕಾರಿಗಳ ವೇತನ ಬಿಲ್ಲು (100ಕ್ಕೆ) | 117-00 |
| 63) | ಜಿಲ್ಲಾ ಪಂಚಾಯತಿ ನಗದು ಹಣದ ಚಲನ್ | 40-00 |
| 64) | ತಾಲ್ಲೂಕು ಪಂಚಾಯತ್, ಕೆ.ಎಫ್.ಸಿ. ಚಲನ್ | 40-00 |
| 65) | ತಾಲ್ಲೂಕು ಪಂಚಾಯತ್, ಅನುದಾನ ಬಿಲ್ಲು | 21-00 |
| 66) | ತಾಲ್ಲೂಕು ಪಂಚಾಯತ್, ಕೆ.ಎಫ್.ಸಿ. 22 | 77-00 |
| 67) | ತಾಲ್ಲೂಕು ಪಂಚಾಯತ್, ಸಿ.ಟಿ.ಎಫ್-7 | 21-00 |
| 68) | ತಾಲ್ಲೂಕು ಪಂಚಾಯತ್, ನಾನ್ ಗೆಜೆಟೆಡ್ ವೇತನ ಬಿಲ್ಲು | 117-00 |
| 69) | ತಾಲ್ಲೂಕು ಪಂಚಾಯತ್, ಕೆ.ಎಫ್.ಸಿ. 29 | 78-00 |
| 70) | ತಾಲ್ಲೂಕು ಪಂಚಾಯತ್ ಸಾದಿಲ್ವಾರ್ ಬಿಲ್ಲು | 40-00 |
| 71) | ತಾಲ್ಲೂಕು ಪಂಚಾಯತ್, ಎಂ.ಸಿ.ಇ. | 39-00 |
| 72) | ತಾಲ್ಲೂಕು ಪಂಚಾಯತ್, ಡಿ. ಸಿ. ಬಿಲ್ಲು | 39-00 |
| 73) | ತಾಲ್ಲೂಕು ಪಂಚಾಯತ್, ಸಿ. ಟಿ. ಎಸ್-9 | 21-00 |
| 74) | ಜಿಲ್ಲಾ ಗೆಜೆಟಿಯರ್ ಬಿಜಾಪುರ | 242-00 |
| 75) | ಅನಧಿಕೃತ ಕಟ್ಟಡಗಳ ಸಕ್ರಮಗೊಳಿಸುವ ನಿಯಮಗಳು | 15-00 |
| 76) | ಮಾರಾಟ ತೆರಿಗೆ ಅಧಿನಿಯಮ-1992 | 10-00 |
| 77) | ವಿಶ್ವ ವ್ಯಾಪಾರಿ ಸಂಸ್ಥೆ ಕೃಷಿ ಆಹಾರ ಕ್ಷೇತ್ರದ ವರದಿ | 30-00 |
| 78) | ಅಂಗೀಕೃತ ಪುಸ್ತಕ ವ್ಯಾಪಾರಿಗಳ ನೋಂದಣಿ ಅರ್ಜಿ | 20-00 |
| 79) | ಕೆ. ಸಿ. ಎಸ್. ಆರ್. | 70-00 |
| 80) | ಮಾನ್ಯತೆ ಪಡೆಯದ ವಿದ್ಯಾರ್ಥಿ ಪ್ರವೇಶ ನಿಷೇಧ | 10-00 |

| ಕ್ರಮ ಸಂಖ್ಯೆ | ಪ್ರಕಟಣೆಗಳ ಹೆಸರು | ದರ ರೂ. |
|---|---|---|
| 81) | ಲೋಕೋಪಯೋಗಿ ಇಲಾಖೆ ಸಂಹಿತೆ-11 | 50-00 |
| 82) | ಪ್ರೌಢ ಶಿಕ್ಷಣ ಮಂಡಳಿ ಅಧಿನಿಯಮ | 30-00 |
| 83) | ಅರಣ್ಯ ಉತ್ಪನ್ನ ಸರಬರಾಜು ಮಾಡುವ ಅಧಿನಿಯಮ | 10-00 |
| 84) | ರಾಜೀವಗಾಂಧಿ ಆರೋಗ್ಯ ವಿಜ್ಞಾನ ಅಧಿನಿಯಮ | 20-00 |
| 85) | ಅಲ್ಪ ಸಂಖ್ಯಾತರ ಆಯೋಗದ ಅಧಿನಿಯಮಗಳು-1994 | 20-00 |
| 86) | ಬಾಡಿಗೆ ಅಧಿನಿಯಮ | 12-00 |
| 87) | ಪಂಚಾಯತ್ ರಾಜ್ ಕೈಪಿಡಿ | 50-00 |
| 88) | ಕರ್ನಾಟಕ ಕೃಷಿ ಉತ್ಪನ್ನಗಳ ಮಾರುಕಟ್ಟೆ ನಿಯಂತ್ರಣ ಅಧಿನಿಯಮ | 80-00 |
| 89) | ಕರ್ನಾಟಕ ಹಿಂದೂ ಧಾರ್ಮಿಕ ದತ್ತಿ ಅಧಿನಿಯಮ-1997 | 28-00 |
| 90) | ಕರ್ನಾಟಕ ಬಾಡಿಗೆ ಅಧಿನಿಯಮ | 40-00 |
| 91) | ಬೆಂಗಳೂರು ನಗರ ನಿವೇಶನಗಳ ಮೌಲ್ಯ ನಿಗದಿ | 50-00 |
| 92) | ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ | 8-00 |
| 93) | ಬೇನಾಮಿ ವ್ಯವಹಾರ ನಿಷೇಧ ಅಧಿನಿಯಮ | 8-00 |
| 94) | ಸಿನಿಮಾ ಕೆಲಸಗಾರರ ಕಲ್ಯಾಣ ನಿಧಿ ಅಧಿನಿಯಮಗಳು | 10-00 |
| 95) | ಮುಖ್ತಾರನಾಮೆ ಅಧಿನಿಯಮ | 8-00 |
| 96) | ಒಕ್ಕೂಟ ಉತ್ಪಾದನಾ ಸುಂಕಗಳ ಅಧಿನಿಯಮ | 8-00 |
| 97) | ಪುರಾತನ ವಸ್ತು ಕಲ್ಯಾಣನಿಧಿ ಅಧಿನಿಯಮ | 13-00 |
| 98) | ಅಂತರ ರಾಜ್ಯ ವಲಸೆ ಹೋಗುವ ಕೆಲಸಗಾರರ ಅಧಿನಿಯಮ | 14-00 |
| 99) | ರಸ್ತೆ ಸಾರಿಗೆ ನಿಗಮಗಳ ಅಧಿನಿಯಮ | 16-00 |
| 100) | ಪಶು ಸಂಪತ್ತು ಆಮದು ಅಧಿನಿಯಮ | 10-00 |
| 101) | ಕಂಪೆನಿ ಕಾರ್ಯದರ್ಶಿಗಳ ಅಧಿನಿಯಮ | 16-00 |
| 102) | ಮುಸ್ಲಿಂ ಮಹಿಳೆಯರ ವಿವಾಹ ವಿಚ್ಛೇದನಾ ಹಕ್ಕು ಅಧಿನಿಮಯ | 10-00 |
| 103) | ವಿದೇಶೀಯರ ನೋಂದಣಿ ಅಧಿನಿಯಮ | 8-00 |
| 104) | ಪತ್ರಿಕಾ ಪರಿಷತ್ ಅಧಿನಿಯಮ | 13-00 |
| 105) | ರಾಷ್ಟ್ರೀಯ ಗೃಹ ನಿರ್ಮಾಣ ಬ್ಯಾಂಕ್ ಅಧಿನಿಯಮ | 20-00 |
| 106) | ಔಷಧಗಾರಿಕೆ ಅಧಿನಿಯಮ | 19-00 |
| 107) | ಧರ್ಮಾರ್ಥ ಮತ್ತು ಧಾರ್ಮಿಕ ನ್ಯಾಸ ಅಧಿನಿಯಮ | 10-00 |
| 108) | ಸಹಕಾರಿ ಸಂಘಗಳ ಅಧಿನಿಯಮ | 12-00 |
| 109) | ಉಪದಾನ ಸಂದಾಯ ಅಧಿನಿಯಮ | 8-00 |
| 110) | ಭ್ರಷ್ಟಾಚಾರ ಪ್ರತಿಬಂಧಕ ಅಧಿನಿಯಮ | 14-00 |
| 111) | ಹಿಂದೂ ವಿವಾಹ ಅಧಿನಿಯಮ | 10-00 |
| 112) | ಕಾನೂನು ಬಾಹಿರ ವಲಸೆಗಾರರ ಅಧಿನಿಯಮ | 8-00 |
| 113) | ಕರ್ನಾಟಕ ಸಾರ್ವಜನಿಕ ಸಂಗ್ರಹಣೆ-ಪಾರದರ್ಶಕತೆ ಅಧಿನಿಯಮ | 20-00 |
| 114) | ಕರ್ನಾಟಕ ಸರ್ಕಾರಿ ಖಾತೆಗಳ ಮೇಲಿನ ಮಿತಿ ಅಧಿನಿಯಮ | 5-00 |
| 115) | ಹಿಂದೂ ದತ್ತಕ ಮತ್ತು ಜೀವನಾಂಶ | 13-00 |

ನಿರ್ದೇಶಕರು,

ಪಿ. ಆರ್. 1110 ಹೆಚ್. ಗಂಗಯ್ಯ

**PROCEEDINGS OF THE DEPUTY COMMISSIONER OF COMMERCIAL TAXES (ASSESSMENTS-31) FAST TRACK, CITY DVN-3, BANGALORE**

**Present: Sri. K. P. Basavaraja**

1. Name of the dealer and address : M/s. General Mills India (P) Ltd. (Formerly Godrej Pills-Burry Ltd.) No.3/2 & 4/2, 6th Mile Stone, Nayandahalli, Bangalore-39.
2. KST. No. : 90500430
   CST.No. 90550432

**Subject :** Loss of Original copies of 'F' forms bearing No. H. 458787, dated: 6.6.2000, No. H. 458792 dated: 6.6.2000, No. H. 459903 dated: 15.6.2000 and No. H. 460379 dated: 19.8.2000 reg.

It is brought to the notice of all those concerned that this office has issued 'F' forms bearing No. H. 458787 dated: 6.6.2000, No. H. 458792 dated: 6.6.2000, No. H. 459903 dated: 15.6.2000 and No. H. 460379 dated: 19.8.2000 to M/s. General Mills India Pvt. Ltd., (Formerly Godrej Pillsburry Ltd). No. 3/2 & 4/2, 6th Mile Stone, Nayandahalli, Bangalore-39, have reported that they have lost the said 'F' forms issued to M/s. Godrej Foods Limited, C/o S & S Industries & Enterprises, 40, Mangadu Village, Arcot, Ladavaram Main Road, Arcot Taluk, N.A.A. District, Tamilnadu-632502, while sent for zerox. They have lost the said 'F' forms bearing No. H. 458787, dated: 6.6.2000, No. H. 458792 dated: 6.6.2000, No. H. 459903 dated: 15.6.2000 and No. H. 460379 dated: 19.8.2000 for Rs. 75,33,390-00 related to the stock transfer covered for the months of Dec.99, Jan 2000, March 2000 and June 2000 issued by the said dealer.

**Order No. EST. CR. 6/2003-04 Dated: 1st September 2003 Under CST ACT 1956**

In view of the above, I Sri. K. P. Basavaraja, Deputy Commissioner of Commercial Taxes (Assessment-31) Fast Track, Bangalore, declare that the said 'F' Forms No. H. 458787 dated: 6.6.2000, No.H 458792 dated: 6.6.2000, No. H. 459903 dated: 15.6.2000 and No. H. 460379 dated: 19.8.2000 will not have any value as the undersigned has declared the said forms as obsolete. If anybody finds the said 'F' forms may surrender the same to the DCCT (Assts.31) Fast Track, Bangalore, and the details are as follows:

**FORMAT**

1. Assessing authority : Deputy Commissioner of Commrl. Taxes (Assts. 31) Fast Track, City Dvn-3, Gandhinagar, Bangalore-9.
2. Description of forms : 'F' form declaration
3. Machine Sl. No. of lost 'F' form : No.H. 458787, No. H. 458792, No.H. 459903 & No. H. 460379
4. Dealer to whom the form issued : M/s General Mills India (P) Ltd., (formerly Godrej Pillsburry Ltd.,) No. 3/2 & 4/2, 6th Mile Stone, Nayandahalli, Bangalore-39
5. KST & CST Number : 90500430/90550432
6. Date of report of loss received in this office of the assessing authority : 19.3.2003
7. How lost/theft, destruction: in transit : Lost while sent for Zerox.

**K. P. BASAVARAJA**
Deputy Commissioner of Commrl. Taxes.
(Assts) Fast Track 31 Bangalore-560009.

**Deputy Commissioner of Commercial Taxes (Assts.31) Fast Track, VTK Building, Bangalore.**

| Number (including code No.) declaration form/s lost destroyed or stolen | Name & address of the dealer to whom declaration form/s is/are issued by the Dept. with date of issue | Registration certificate No. of the dealer under KST/CST Act 1957 | The address of the dealer to whom the declaration is/are sent | Date of issue of form/by the dealer | Whether lost/ destroyed or stolen | Remarks |
|---|---|---|---|---|---|---|
| 1 | 2 | 3 | 4 | 5 | 6 | 7 |
| 'F' form No.H 458787 No.H 458792 No.H 459903 & No.H.460379 | M/s. General Mills India (P) Ltd. (formerly Godrej Pillsburry Ltd.) Nayandahalli, Bangalore-39 | KST 90500430 CST 90550432 | M/s. Godrej Foods Ltd., C/o S & S Industries & Enterprises, 40, mangadu Village, Arcot, Ladavaram Main Road, Arcot Taluk, N.A.A. District, Tamilnadu-632502. | 6.6.2000, 6.6.2000 15.6.2000 & 19.8.2000 | Lost | |

**K. P. BASAVARAJA**
Deputy Commissioner of Commrl. Taxes.
(Assts) Fast Track 31 Bangalore-560009.

PR-1109